R.N.I. No. KARBIL/2001/47147
POSTAL REGISTRATION
No. RNP/KA/BGS/2202/2014-16

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಜನವರಿ ೩೦, ೨೦೧೪ (ಮಾಘ ೧೦, ಶಕ ವರ್ಷ ೧೯೩೫)<br>Bangalore, Thursday, January 30, 2014 (Magha 10, Shaka Varsha 1935) | ಸಂಚಿಕೆ ೫<br>Issue 5 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಕೃಷ್ಣರಾಜಸಾಗರ ಜಲಾಶಯ ಯೋಜನೆಯ ನೀರಾವರಿ ಸಲಹಾ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ:ನೀಇ 53 ಎಂಎಂಕೆ 2008, ದಿನಾಂಕ:29-07-2008.
2. ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಕಾನೀನಿ/ತಾಂತ್ರಿಕ-9/65/2012-13, ದಿನಾಂಕ:22-06-2013.

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ಸರ್ಕಾರದ ಆದೇಶದಲ್ಲಿ ಅಧಿಕಾರಿಗಳು ಹಾಗೂ ಅಧೀಕಾರೇತರ ಸದಸ್ಯರನ್ನು ಒಳಗೊಂಡಂತೆ ಕೃಷ್ಣರಾಜಸಾಗರ ಜಲಾಶಯದ ನೀರಾವರಿ ಸಲಹಾ ಸಮಿತಿಯನ್ನು ರಚಿಸಲಾಗಿತ್ತು.

2. ಮೇಲೆ ಓದಲಾದ (2) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಬೆಂಗಳೂರು, ಇವರು ವಿಷಯದ ಬಗ್ಗೆ ಪ್ರಸ್ತಾವನೆ ಸಲ್ಲಿಸುತ್ತಾ, ಅಧಿಕಾರಿ ಸದಸ್ಯರು, ಅಧಿಕಾರೇತರ ಸದಸ್ಯರು, ವಿಶೇಷ ಆಹ್ವಾನಿತ ಅಧಿಕಾರಿ ಸದಸ್ಯರು ಹಾಗೂ ವಿಶೇಷ ಆಹ್ವಾನಿತ ಅಧಿಕಾರೇತರ ಸದಸ್ಯರಗಳನ್ನು ಒಳಗೊಂಡ ಪಟ್ಟಿಯನ್ನು ಸಲ್ಲಿಸುತ್ತಾ, ಕೃಷ್ಣರಾಜಸಾಗರ ಜಲಾಶಯ ಯೋಜನೆಯ ನೀರಾವರಿ ಸಲಹಾ ಸಮಿತಿಯನ್ನು ಪುನರ್ ರಚಿಸುವಂತೆ ಕೋರಿರುತ್ತಾರೆ.

3. ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕಷವಾಗಿ ಪರಿಶೀಲಿಸಲಾಗಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಜಸಂಇ 97 ಎಂಎಂಕೆ 2013, ಬೆಂಗಳೂರು, ದಿನಾಂಕ: 18-07-2013**

ಕೃಷ್ಣರಾಜಸಾಗರ ಜಲಾಶಯದ ನೀರಿನ ನಿರ್ವಹಣೆಗಾಗಿ ಅಧಿಕಾರಿ ಸದಸ್ಯರು, ಅಧಿಕಾರೇತರ ಸದಸ್ಯರು, ವಿಶೇಷ ಆಹ್ವಾನಿತ ಅಧಿಕಾರಿ ಸದಸ್ಯರು ಹಾಗೂ ವಿಶೇಷ ಆಹ್ವಾನಿತ ಅಧಿಕಾರೇತರ ಸದಸ್ಯರಗಳನ್ನು ಒಳಗೊಂಡ ಕೃಷ್ಣರಾಜಸಾಗರ ಜಲಾಶಯ ಯೋಜನೆಯ ನೀರಾವರಿ ಸಲಹಾ ಸಮಿತಿಯನ್ನು ಈ ಕೆಳಕಂಡಂತೆ ಪರಿಷ್ಕರಿಸಿ ಮುಂದಿನ ಆದೇಶ ಹೊರಡಿಸುವವರೆಗೆ ಪುನರ್ ರಚಿಸಲಾಗಿದೆ :

**ಅಧ್ಯಕ್ಷರು:-** ಶ್ರೀ ಎಂ.ಹೆಚ್.ಅಂಬರೀಶ್, ಮಾನ್ಯ ವಸತಿ ಸಚಿವರು, ಕರ್ನಾಟಕ ಸರ್ಕಾರ ಮತ್ತು ಮಂಡ್ಯ ಜಿಲ್ಲಾ ಉಸ್ತುವಾರಿ ಸಚಿವರು.

**ಅಧಿಕಾರಿ ಸದಸ್ಯರು:-**

1) ಆಡಳಿತಾಧಿಕಾರಿಗಳು, ಕಾವೇರಿ ಜಲಾನಯನ ಅಚ್ಚುಕಟ್ಟು ಅಭಿವೃದ್ದಿ ಪಾಧಿಕಾರ, ಮೈಸೂರು.
2) ಮುಖ್ಯ ಇಂಜಿನಿಯರ್, ಕಾವೇರಿ ನೀರಾವರಿ ನಿಗಮ ನಿಯಮಿತ, ನೀರಾವರಿ (ದ) ವಲಯ ಮೈಸೂರು.
3) ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.
4) ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಮೈಸೂರು.
5) ಸೂಪರಿಂಟೆಂಡಿಂಗ್ ಇಂಜಿನಿಯರ್, ಕಬಿನಿ ನಾಲಾ ವೃತ್ತ, ಮೈಸೂರು.
6) ಸೂಪರಿಂಟೆಂಡಿಂಗ್ ಇಂಜಿನಿಯರ್, ಕಾವೇರಿ ನೀರಾವರಿ ನಿಗಮ ನಿಯಮಿತ, ಕೃಷ್ಣರಾಜಸಾಗರ ಆಧುನೀಕರಣ ಮತ್ತು ಮಧ್ಯಮ ನೀರಾವರಿ ಯೋಜನಾ ವೃತ್ತ, ಮಂಡ್ಯ – ಸದಸ್ಯ ಕಾರ್ಯದರ್ಶಿಗಳು.
7) ಜಂಟಿ ನಿರ್ದೇಶಕರು, ಕೃಷಿ ಇಲಾಖೆ, ಮಂಡ್ಯ.

**ಅಧಿಕಾರೇತರ ಸದಸ್ಯರು:–** ಶ್ರೀಯುತರುಗಳಾದ,

1) ಡಾ.ಹೆಚ್.ಸಿ. ಮಹದೇವಪ್ಪ, ಮಾನ್ಯ ಲೋಕೋಪಯೋಗಿ ಸಚಿವರು ಮತ್ತು ಶಾಸಕರು, ಟಿ. ನರಸೀಪುರ ವಿಧಾನಸಭಾ ಕ್ಷೇತ್ರ.
2) ಅಧ್ಯಕ್ಷರು, ಕಾವೇರಿ ಜಲಾನಯನ ಅಚ್ಚುಕಟ್ಟು ಅಭಿವೃದ್ಧಿ ಪ್ರಾಧಿಕಾರ, ಮೈಸೂರು.
3) ಕೆ.ಎಸ್. ಪುಟ್ಟಣಯ್ಯ ಮಾನ್ಯ ಶಾಸಕರು, ಮೇಲುಕೋಟೆ ವಿಧಾನಸಭಾ ಕ್ಷೇತ್ರ.
4) ಡಿ.ಸಿ. ತಮ್ಮಣ್ಣ, ಮಾನ್ಯ ಶಾಸಕರು, ಮದ್ದೂರು ವಿಧಾನಸಭಾ ಕ್ಷೇತ್ರ.
5) ಪಿ.ಎಂ. ನರೇಂದ್ರಸ್ವಾಮಿ ಮಾನ್ಯ ಶಾಸಕರು, ಮಳವಳ್ಳಿ, ವಿಧಾನಸಭಾ ಕ್ಷೇತ್ರ.
6) ಎ.ಬಿ. ರಮೇಶಬಾಬು ಬಂಡೀಸಿದ್ದೇಗೌಡ, ಮಾನ್ಯ ಶಾಸಕರು, ಶ್ರೀರಂಗಪಟ್ಟಣ ವಿಧಾನಸಭಾ ಕ್ಷೇತ್ರ.
7) ಜಿ.ಟಿ. ದೇವೇಗೌಡ ಮಾನ್ಯ ಶಾಸಕರು, ಚಾಮುಂಡೇಶ್ವರಿ ವಿಧಾನಸಭಾ ಕ್ಷೇತ್ರ, ಮೈಸೂರು.
8) ಪಿ.ವಾಸು, ಮಾನ್ಯ ಶಾಸಕರು, ಚಾಮರಾಜ ವಿಧಾನಸಭಾ ಕೇತ್ರ, ಮೈಸೂರು.

**ವಿಶೇಷ ಆಹ್ವಾನಿತ ಅಧಿಕಾರಿ ಸದಸ್ಯರು:–**

1) ಸರ್ಕಾರದ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ, ಬೆಂಗಳೂರು.
2) ಸರ್ಕಾರದ ಕಾರ್ಯದರ್ಶಿ, ಕಾನೂನು ಇಲಾಖೆ, ಬೆಂಗಳೂರು.
3) ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಬೆಂಗಳೂರು.
4) ಜಂಟಿ ನಿರ್ದೇಶಕರು, ಕೃಷಿ ಇಲಾಖೆ, ಮೈಸೂರು.

**ವಿಶೇಷ ಆಹ್ವಾನಿತ ಅಧಿಕಾರೇತರ ಸದಸ್ಯರು:–**

1) ಶ್ರೀಯುತರುಗಳಾದ, ಶ್ರೀ. ಸಿದ್ದರಾಮಯ್ಯ, ಮಾನ್ಯ ಮುಖ್ಯ ಮಂತ್ರಿಗಳು, ಕರ್ನಾಟಕ ಸರ್ಕಾರ ಮತ್ತು ಶಾಸಕರು, ವರುಣಾ ವಿಧಾನಸಭಾ ಕ್ಷೇತ್ರ.
2) ಮಾನ್ಯ ಲೋಕಸಭಾ ಸದಸ್ಯರು, ಮಂಡ್ಯ.
3) ಹೆಚ್. ವಿಶ್ವಾನಾಥ್, ಮಾನ್ಯ ಲೋಕಸಭಾ ಸದಸ್ಯರು, ಮೈಸೂರು.
4) ಎಂ.ಕೆ. ಸೋಮಶೇಖರ್, ಮಾನ್ಯ ಶಾಸಕರು, ಕೃಷ್ಣರಾಜ ವಿಧಾನಸಭಾ ಕ್ಷೇತ್ರ, ಮೈಸೂರು.
5) ತನ್ವೀರ್ ಸೇಠ್, ಮಾನ್ಯ ಶಾಸಕರು, ನರಸಿಂಹರಾಜ ವಿಧಾನಸಭಾ ಕ್ಷೇತ್ರ. ಮೈಸೂರು.
6) ಎನ್. ಚಲುವರಾಯಸ್ವಾಮಿ, ಮಾನ್ಯ ಶಾಸಕರು, ನಾಗಮಂಗಲ ವಿಧಾನಸಭಾ ಕ್ಷೇತ್ರ.
7) ಅಧ್ಯಕ್ಷರು, ಜಿಲ್ಲಾ ಪಂಚಾಯತ್, ಮಂಡ್ಯ.
8) ಅಧ್ಯಕ್ಷರು, ಜಿಲ್ಲಾ ಪಂಚಾಯತ್, ಮೈಸೂರು.
9) ಶ್ರೀ ಹೆಚ್.ಶ್ರೀನಿವಾಸ್, ವಕೀಲರು ಹಾಗೂ ಮಾಜಿ ಕಾಡಾ ಅಧ್ಯಕ್ಷರು, ಮಂಡ್ಯ.
10) ಶ್ರೀ ಯೋಗಾನಂದ ಪಟೇಲ್ ಬಿನ್ ಲೇಟ್ ಪಟೇಲ್ ಮರಿಗೌಡ, ಹುಲ್ಕೆರೆ, ಬೇವಿನಹಳ್ಳಿ ಅಂಚೆ, ಕೊತ್ತತ್ತಿ ಹೋಬಳಿ, ಮಂಡ್ಯ ತಾಲ್ಲೂಕು.
11) ಶ್ರೀ ಟಿ.ಎಂ.ಕೃಷ್ಣ ಬಿನ್ ಮಂಚೇಗೌಡ, ತಗ್ಗಹಳ್ಳಿ ಗ್ರಾಮ ಮತ್ತು ಅಂಚೆ, ಮಂಡ್ಯ.
12) ಶ್ರೀ ಮಹದೇವ್ ಬಿನ್ ದೊಡ್ಡಯ್ಯ, ಸಿದ್ದಲಿಂಗಪುರ ಗ್ರಾಮ, ಕಸಬಾ ಹೋಬಳಿ, ಮೈಸೂರು.

2. ಸದರಿ ಸಮಿತಿಯನ್ನು ಈ ಕೆಳಕಂಡ ನಿಬಂಧನೆಗಳಿಗೊಳಪಟ್ಟು ಪುನರ್ ರಚಿಸಲಾಗಿದೆ :

a. The use of Cauvery water as per the notified order of the Cauvery Water Dispute Tribunal dated:19-02-2013 is without prejudice to the pending Civil Appeal NO.2453/2007 filed by the State before the Hon'ble Supreme Court ; and

b. Use of Cauvery water is subject to the directions, if any, issued by the Supervisory Committee on Cauvery constituted by the Central Government vide notification dated:22-05-2013.

3. ಸದರಿ ಸಮಿತಿಯ ಅಧಿಕಾರೇತರ ಸದಸ್ಯರ ಮತ್ತು ವಿಶೇಷ ಆಹ್ವಾನಿತ ಅಧಿಕಾರೇತರ ಸದಸ್ಯರ ಪ್ರವಾಸ ಭತ್ಯೆ ಮತ್ತು ಇತರೆ ಭತ್ಯೆಗಳನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ:03–02–2001, ರನ್ವಯ ಪಾವತಿ ಮಾಡತಕ್ಕದ್ದು. ಈ ಬಗ್ಗೆ ತಗಲುವ ವೆಚ್ಚವನ್ನು ಕಾವೇರಿ ನೀರಾವರಿ ನಿಗಮ ನಿಯಮಿತದಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್.ಆರ್.ವಿಜಯಸಾರಥಿ**

ವಿಶೇಷ ಕರ್ತವ್ಯಾಧಿಕಾರಿ(ತಾಂತ್ರಿಕ, ಎಂಎಂಐ–3),

ಜಲ ಸಂಪನ್ಮೂಲ ಇಲಾಖೆ.

**P.R. 16**

**SC - 50**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ಸುತ್ತೋಲೆ

**ಸಂಖ್ಯೆ: ಸಿಆಸುಇ 56 ಇಆಇ 2013(1), ಬೆಂಗಳೂರು, ದಿನಾಂಕ: 12ನೇ ಜುಲೈ 2013**

**ವಿಷಯ:** ಭಾರತದ ಭಾಷೆಗಳನ್ನು ಕಂಪ್ಯೂಟರ್‌ಗಳಲ್ಲಿ ಬಳಸಲು ಅನುವಾಗಲು ಭಾರತ ಸರ್ಕಾರದ ವಿದ್ಯುನ್ಮಾನ ಮತ್ತು ಮಾಹಿತಿ ತಂತ್ರಜ್ಞಾನ ಇಲಾಖೆ (DeitY)ಯವತಿಯಿಂದ ತಯಾರಿಸಲಾದ ಭಾರತ ಭಾಷೆಗಳಿಗೆ ಸಂಬಂಧಿಸಿದ ಫಾಂಟ್ ಮತ್ತು ತಂತ್ರಾಂಶದ ಉಪಕರಣಗಳನ್ನು (Indian Language fonts & Software tools) ಬಳಸುವ ಬಗ್ಗೆ.

**ಓದಲಾಗಿದೆ :** ಕೇಂದ್ರ ಸರ್ಕಾರದ ವಿದ್ಯುನ್ಮಾನ ಮತ್ತು ಮಾಹಿತಿ ತಂತ್ರಜ್ಞಾನ ಇಲಾಖೆ (DeitY)ಯ ದಿನಾಂಕ: 08.05.2013ರ ಅ.ಸ.ಪತ್ರ ಸಂಖ್ಯೆ: 11(21) /2005–HCC(TDIL).

ಕೇಂದ್ರ ಸರ್ಕಾರದ ಉಲ್ಲೇಖಿತ ದಿನಾಂಕ: 08.05.2013ರ ಅ.ಸ. ಪತ್ರದನ್ವಯ ಭಾರತದ ಭಾಷೆಗಳನ್ನು ಕಂಪ್ಯೂಟರ್‌ಗಳಲ್ಲಿ ಬಳಸಲು ಅನುವಾಗಲು ಭಾರತ ಸರ್ಕಾರದ ವಿದ್ಯುನ್ಮಾನ ಮತ್ತು ಮಾಹಿತಿ ತಂತ್ರಜ್ಞಾನ ಇಲಾಖೆ (DeitY)ಯ ವತಿಯಿಂದ ತಯಾರಿಸಲಾದ ಭಾರತ ಭಾಷೆಗಳಿಗೆ ಸಂಬಂಧಿಸಿದ ಫಾಂಟ್ ಮತ್ತು ತಂತ್ರಾಂಶದ ಉಪಕರಣಗಳನ್ನು (Indian Language fonts & Software tools) ಬಳಸುವ ಬಗ್ಗೆ ಕೋರಲಾಗಿದೆ. ಆ ಫಾಂಟ್ ಮತ್ತು ತಂತ್ರಾಂಶದ ಉಪಕರಣಗಳು ಭಾರತದ ಸಂವಿಧಾನದಂತೆ ಮಾನ್ಯತೆ ಪಡೆದ 22 ಭಾಷೆಗಳಿಗೆ ಸಂಬಂಧಿಸಿರುತ್ತವೆ ಹಾಗೂ ಸಿ.ಡಿಯ ರೂಪದಲ್ಲಿ ಲಭ್ಯವಿರುತ್ತವೆ ಉಲ್ಲೇಖಿತ ಪತ್ರದ ಸಂಬಂಧಿಸಿದ ಭಾಗವನ್ನು ಈ ಕೆಳಗೆ ಉದ್ಧರಿಸಿದೆ:–

"TDIL programme of DeitY is engaged in the development of language technologies and associated standards. As a result of years of sustained work, a rich repository of achievements in the form of tools, fonts, applications and standards has been created, which can be accessed through http://www.tdil-dc.in.

A specific achievement out of the above, which may be of particular interest to all Government departments, is a collection of software tools and fonts for all the 22 constitutionally recognized languages in the form of a CD. Office related tasks such as preparing letters, spreadsheet, presentation, database and drawing can be easily done with it effectively. This entire suit is free and is also available for download from http://www.ildc.in.

A request for free shipment of the CDs at desired address can be made by sending an E-mail at info@ildc.in. For user support, a toll free no 1800-209-1015 is operational. The training also can be organized by DeitY depending on your specific requirements.

I request you to implement and make extensive use of these tools in all your e-governance initiatives. It is also requested that the copy of this communication may be forwarded to all government departments and District Collectors in your state who may like to disseminate these Indian language tools widely for use in their offices. Any comments and suggestions on these tools are most welcome.

For any questions or clarifications, you may kindly contact Ms. Swaran Lata, HoD & Scientist 'F' at E-mail: slata@mit.gov.in and phone 011-24363525."

xxxx xxxx xxxx xxxx

2. ಈ ಕುರಿತು ಮಾಹಿತಿಯನ್ನು "http://www.ildc.in" ಎಂಬ ವೆಬ್‌ಸೈಟ್‌ನಲ್ಲಿ ಪಡೆಯಬಹುದಾಗಿದೆ.

3. ಅದರಂತೆ, ಸದರಿ ಸೌಲಭ್ಯವನ್ನು ಬಳಸಲು ಹಾಗೂ ಅದನ್ನು ಆಯಾಯ ಆಡಳಿತ ಇಲಾಖೆಯ ವ್ಯಾಪ್ತಿಯೊಳಗೆ ಬರುವ ಇಲಾಖೆ, ಸಾಯತ್ತ ಸಂಸ್ಥೆ ಇತ್ಯಾದಿಗಳ ಗಮನಕ್ಕೆ ತರಲು ಸರ್ಕಾರದ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿಯವರುಗಳನ್ನು ಈ ಮೂಲಕ ಕೋರಿದೆ.

**ವೈ. ಸುಶೀಲ**
ಪೀಠಾಧಿಕಾರಿ–2,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಇ–ಆಡಳಿತ)

**P.R. 6**
**SC - 200**

## LABOUR SECRETARIAT

**SUB :** Social Security Benefit for the unorganized workers in Karnataka ; Up-scaling the concept of Single Window through Worker Facilitation Center, An initiative of Government of Karnataka ; Extension of the SSP (K) in all the districts of the State.

**READ :** Proceedings of the State Level Steering Committee meeting held on 20-02-2013.

**PREAMBLE :**

The unorganized workers social security Act 2008 provides scope for formation of Workers Facilitation Centers (WFCs). Accordingly the Department of Labour, Government of Karnataka and German Development Cooperation (GIZ) have been implementing-pilot project on social security benefits for unorganized workers in Karnataka in 6 districts viz., (1) Bangalore Rural and Urban, (2) Mysore, (3) Bellary, (4) Gulbarga and (5) Dakshina Kannada since 2009 by including 2 taluks per district under the bilateral agreement between the Government of India and the Government of Germany. This project has pioneered the concept of single window approach by setting up 250 WFCs at the level of GP and Urban Wards in the above 6 districts.

The evaluation study report on impact of the project was jointly conducted by the Institute for Social and Economic Change (ISEC) and the University of Oxford, UK. The results of the impact study were presented to the State Level Steering Committee and a decision was taken to the effect that the State Government will deepen the concept of single window by starting WFCs by covering one taluk each of all the districts. A close co-ordination among the key schemes covering the risks of livelihood (self and wage employment), health (secondary and tertiary), old age (social assistance and contributory), life (natural, accident) and disability administered by department of RDPR, Labour, Municipal Administration, Health, Revenue and Women & Child Development will be established.

GIZ will support the initiative of the GoK as a capacity building partner and financially support the development of new need-based training modules. The new training modules prepared as a part of the co-operation will be developed jointly in consultation with the departments involved in the initiative and ATI. The delivery of the training inputs to various stakeholders will be done through the DTIs and also technically support the Government by collating the learing's of various models of single window system being experimented in other States of India and abroad. The upscaling project will start functioning from 01-04-2014 onwards.

The Government has accorded its approval to extend the ongoing project in collaboration the GIZ to all the districts of the State by covering one taluk per district. Hence this order.

**GOVERNMENT ORDER NO. LD 63 LWA 2013 (P1), Bangalore, dated : 19-11-2013.**

In view of the above, the Government of Karnataka is pleased to accord the sanction to extend the Social Security Programme in Karnataka (SSPK-WFC concept) project in all the districts of the State by covering one taluk per district. Accordingly the approval of the Government is accorded for the following :

1. Gram Panchayaths/ward offices of urban local bodies are to be formally recognized as Single Window to deliver social security schemes. Gram Panchayath secretaries and community organizers at ward level and Self Help Groups (SHG) representatives (where NRLM is being implemented) will be the facilitators.
2. To begin with, this approach will be tested in one taluk per district and the job profile of the facilitators will be adjusted accordingly. Depending on the outcome of the impact evaluation study, GoK will consider expansion of the concept to the whole State.
3. The Gram Pachayath Secretaries, the community organizers of the ward offices of urban local bodies and wherever Self Help Groups (SHG) representatives are appointed, they will be authorized to receive, process and submit the complete applications to the concerned departments for sanctioning.
4. Inter and intra-departmental co-operation among Rural Development and Panchat Raj Department, Labour Department, Department of Municipal Administration, Health Department, Revenue Department and Department of Women and Child Development is officially agreed upon to deliver the schemes through single window. Labour Department will take lead in this initiative.
5. Salary of the coordinators appointed one at State and each at taluk for monitoring and reporting the progress will be financed by the State Government.
6. Integration of manual data collected by various field functionaries at Gram Panchayath and Ward level and the GIZ/SSP(K) project will be integrated in Panchatantra/ULB portal is agreed upon. Before this initiative is scaled up to the state, it will be piloted in the on-going districts of the Department of Labour/GIZ project.
7. Permission is sought to use the PDS/Voter ID data as a base to extend the social security benefits.
8. GIZ will accomplish this initiative of GoK as a capacity building partner during the period 2014-2017 and also contribute financially (performance allowance) towards the incentives to be paid to the facilitators, i.e., Rs. 1,500/- and Rs. 500/- towards travel cost per month during this period.

By Order and in the name of the Governor of Karnataka

**PRABHUDEVA**

Under Secretary to Government,

Labour Department.

**P.R. 1248**

**SC-200**

## LAW, JUSTICE AND HUMAN RIGHTS SECRETARIAT

**SUB** : Enhancement of Karnataka State Legal Services Authorities Advocates' Fee-Approval of the Government for amendment of schedule I and II of Karnataka State Legal Services Authority Regulations-1997.

**READ :**
1. Letter No. KSLSA/2ADM/2009 dated 08-08-2013, from the Member Secretary, Karnataka State Legal Services Authority.
2. Karnataka State Legal Services Authority Regulations, 1997.
3. Legal Services Authorities Act, 1987 (No. of 1987).

**PREAMBLE :**

The Member Secretary, Karnataka Legal Service Authority has sent a proposal for amendment of schedule I and II of Karnataka State Legal Service Authority Regulations 1997 for enhancement of the Authority's Advocates' Fee vide letter read at (1) above. It is stated that a vision document for strengthening and effective implementation of Legal Services Authorities Act, 1987 of NALSA, among other things indicate the requirement to enhance the fees payable to the Advocates of the Legal Services Institutions in the country for effective rendering of various types of legal aid services.

It is stated that Executive Chairpersons of Madhya Pradesh State Legal Services Authority, Karnataka State Legal Service Authority and Haryana State Legal Service Authority after a thorough deliberation and in pursuance of the resolution of the 6th all Indian meet of the Executive Chairpersons and Member Secretaries of the State Legal Services Authorities held on 17th and 18th of February 2007 took steps to propose the following guidelines in the matter of payment of fees in question.

1) Uniformity and rationalization in fees structure of Legal aid counsel.
   - (i) Uniformity and rationlization
   - (ii) Market rationlization
   - (iii) Skill rationalization
   - (iv) Non monetary incentives and motivation
2) Fees structure
3) i) For Dist. And sessions Court
   - ii) For The Courts of Civil Judge/Judicial Magistrate
   - iii) For Revenue Courts
   - iv) For other courts
   - A) For High Court
     - Part-1 Civil work
     - Part-2 Criminal work
4) Incidental expenditure miscellaneous matters

The matter in question was discussed in the General Body Meeting of KSLSA. In view of the resolution passed by the General Body Meeting of KSLSA proposal was sent by the KSLSA for revision of fees structure to the advocates. After various correspondence proposal dated : 08-08-2013 has been submitted by the KSLSA.

It is stated that NALSA is sending grants for carrying out legal services activity and the 13th finance commission also provides sufficient fund for legal services. It is further stated that there is no additonal financial burden on the State Government in case of revision in payment of payable to advocates for the applicants/clients to whom legal aid is given, the said advocate appearing before High Court of Karnataka and Lower Courts in the states of Karnataka. The existing rates of Advocates' Fee fixed in schedule I and II of KSLSA Regulation 1997 have not been revised for the past 16 years. The Karnataka State Legal Services Authority gives free legal aid to the weaker sections by implementing the guidelines of National Legal Services Authority.

The proposal is duly examined by the Government. The Government considers that it is necessary to enhance rates of the Advocates' Fee of Karnataka State Legal Services Authority. Hence, the following order.

**GOVERNMENT ORDER NO. LAW 52 LAD 2013, Bangalore, Dated : 22-11-2013.**

Government are pleased to enhance the rates of Advocates' Fee of The Karnataka State Legal Services Authority as per Annexure I and II appended to this order.

2) Karnataka State Legal Services Authority is directed to amend the rates of Advocates' Fee fixed in Schedule I and II of the Karnataka State Legal Services Authority Regulations, 1997 as per Annexure I and II appended to this order, in exercise of the powers conferred by Sec. 29A of Legal Services Act 1987.

3) This order is issued with the concurrence of Finance Department vide their UO note No. FD 301 Exp-10/2013, dated : 13-11-2013.

By Order and in the name of the Governor of Karnataka

**J. LAKSHMANA**

Under Secretary to Government (I/c),

Law, Justice and Human Rights Department (Admn-2).

Annexure I to Government Order No. LAW 58 LAD 2013, dated : 22-11-2013.

Fee Payable to Legal Practitioner appearing in the matters arising out of the cases referred to by the District Authority, Taluk Committee and Tribunals or Authorities or Forum

**Schedule-I (Tribunals and Lower Courts)**

| Sl. No. | Advocates fee According to KSLSA Regulations 1997 Existing | | Revised Fee |
|---|---|---|---|
| 01 | **Motor Vehicle Accident Cases :** | | |
| | 1. If the amount of compensation awarded is Rs. 15,000/- or less | Rs. 350/- | Rs. 500/- |
| | 2. If the amount of compensation awarded exceeds Rs. 15,000/- but does not exceeds Rs. 30,000/- | Rs. 350/-+7½ on the amount in excess of Rs. 15,000/- | |
| | 3. If the amount of compensation exceeds Rs. 30,000/- | Rs. 1,475/-+5% of the amount in excess of Rs. 30,000/- | |
| | Provided that the total amount of fees payable should not exceed Rs. 3,000/- | | |
| 02 | **Labour Courts and Industrial Tribunals:** | Rs. 40/- per day actual hearing subject to a minimum of Rs. 200/- and maximum of Rs. 400/- | a) Labour Courts Rs. 500/- |
| 03 | **Other Cases** | Rs. 25/- per day actual hearing subject to a minimum of Rs. 100/- and maximum of Rs. 200/- | a) Dist. consumer Disputes Redressal Forum Rs. 500/-<br>b) State consumer Disputes Redressal Commission/Tribunal Rs. 500/-<br>c) For revenue courts (Including Board, Commissioners, Collectors, SDO/SDM) Rs. 500/- |
| 05 | **Civil Cases** | | |
| | 1. Original Suits :- Advocates' fees shall be calculated on the value of the subject matter. | | a) A class suits- Rs. 1,500/-<br>b) class suits Rs. 750/- |
| | (a) On the first sum of Rs. 5,000/- | at 10% | |
| | (b) On the next sum of Rs. 5,000/- | at 7 ½ % | |
| | (c) On the next sum of Rs. 30,000/- | at 5% | |
| | (d) On the next sum of Rs. 60,000/- | at 1% | |
| | (e) On the balance remaining thereafter | at ½ % | |
| | **4. Regular Appeals** | Rates specified in para 1 above on the value of the amount of the subject matter in dispute in appeal. Minimum Rs. 100/- | a) A class Rs. 1,000/-<br>b) B class Rs. 500/- |

| Sl. No. | Advocates fee According to KSLSA Regulations 1997 Existing | | Revised Fee | |
|---|---|---|---|---|
| 06 | **Criminal**<br>1) Criminal cases, criminal miscellaneous cases where Matrimonial matter is involved and criminal appeals.<br>2) Bail applications<br>3) In revision cases<br>4) (a) In private complaints<br>a) If is not registered a case by the Court<br>b) For drafting Criminal complaints and appeals. | Rs. 50/- per day of effective hearing subject to a maximum of Rs. 150/-per case and minimum of Rs. 100/-<br>Rs. 25/- per application<br>Rs. 75/- per application<br>Rs. 50/- per day of effective hearing subject to a maximum of Rs. 150/- per case and minimum of Rs. 100/-<br>Rs. 50/- per case<br>Rs. 40/- per case | **(C.J/Jud Magistrarate)**<br>Rs. 500/-<br>Rs. 250/- to 300/-<br>a) Maintenance Cases Rs. 500/-<br>b) MJC Rs. 200/- | (Dist & Sessions court)<br>a) Session case Rs. 2,000/-<br>b) other than session case Rs. 1,000/-<br>c) Bail Applications Rs. 400/-<br>a) Matrimonial Cases Rs. 1000/-<br>b) MJC Rs. 400/-<br>c) Criminal Rev Rs. 400/-<br>d) Criminal Appeals Rs. 1000/- |

Annexure II to Government Order No. LAW 58 LAD 2013, dated : 22-11-2013.

**Fee payable to Legal Practitioner Appearing in the High Court**

**Schedule-II-High Court**

| Sl. No. | Advocates fee According to KSLSA Regulations 1997 Existing | | Revised Fee |
|---|---|---|---|
| 01 | **Appeals**<br>1. Regular First Appeals and Regular Second Appeal.<br>2. Execution First Appeals and Execution Second Appeal. | Value of the subject matters of the appeal as specified for original suits in the sub-ordinate Courts. Minimum Rs. 200/-<br>1/3 fee which would have been payable, if the appeal had been a regular appeal, minimum of Rs. 100/- | 1. Civil Appeals arising from the original decree or from appellate decree Rs. 1,500/-<br>Writ appeals/L.P.A.s Rs. 1,000 to 1,500/- |
| 02 | **Misc. Appeal**<br>1) Appeals against Interlocutory Orders.<br>2) Appeals arising out of different enactments. | Shall be Rs. 150/-<br>Cases under which the appeal is filed. | Other Misc, Petition (s) Rs. 250/- |
| 04 | **Other Type of Cases**<br>1) Civil Petition<br>2) Writ Petition<br>3) Writ Appeal<br>4) Contempt of Court Cases<br>5) Civil Referred Cases<br>6) Sales Tax Appeal<br>7) Tax Revision case<br>8) S.C.L.A.P. | Rs. 200/-<br>Rs. 200/-<br>Rs. 200/-<br>Rs. 100/-<br>Rs. 200/-<br>Rs. 200/-<br>Rs. 200/-<br>Rs. 50/- to 100/- | **2. Writ Petitions**<br>a. Civil Rev-750/-<br>b. Rent Rev-750/- |
| 05 | **Criminal Appeals** | Rs. 150/-per Appeal +<br>Rs. 50/-per Appeal +<br>Rs. 50/-per day where the hearing exceeds two days. | a. Appeal involving death sentence Rs. 2,500/-<br>b. Appeal involving imprisonment Rs. 1,500/-<br>c. Appeals other than those mentioned at a & b Rs. 1,000/- |
| 06 | **Criminal Matters**<br>a) Criminal Revision cases<br>b) Criminal Petitions<br>c) Habeas Corpus Petition under code of Criminal Procedure | Rs. 100/-<br>Rs. 100/-<br>Rs. 200/- | Rs. 750/-<br>Misc applications including M. Cr. C-Rs. 500/- |

**J. LAKSHMANA**
Under Secretary to Government (I/c),
Law, Justice and Human Rights Department (Admn-2).

**P.R. 1255**
**SC - 75**

## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಮೀನುಗಾರಿಕೆ ಇಲಾಖೆಯ ಆಡಳಿತ ವ್ಯಾಪ್ತಿಯಲ್ಲಿ ಬರುವ ಯಾಂತ್ರೀಕೃತ ಮೀನುಗಾರಿಕೆ ದೋಣಿಗಳಿಗೆ ಪ್ರತಿ ತಿಂಗಳು ಮುನ್ನೂರು ಲೀಟರ್ ಸೀಮೆಎಣ್ಣೆ ವಿತರಿಸುವ ಕುರಿತು.

**ಓದಲಾಗಿದೆ:** 1) ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಪಸಂಮೀ 128 ಮೀಇಯೋ 2013 (ಭಾಗ–1) ದಿನಾಂಕ:10.09.2013ರ ಪ್ರಸ್ತಾವನೆ.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ(1) ರಲ್ಲಿ ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಯ ಅನಧಿಕೃತ ಟಿಪ್ಪಣಿಯಲ್ಲಿ ಮೀನುಗಾರಿಕೆ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಮೀನುಗಾರಿಕೆ ದೋಣಿಗಳಿಗೆ ಪ್ರತಿ ವರ್ಷ ಸೆಪ್ಟೆಂಬರ್ ತಿಂಗಳಿಂದ ಮೇ ತಿಂಗಳವರೆಗೆ 9 ತಿಂಗಳು ಪಡಿತರ ಸೀಮೆಎಣ್ಣೆಯನ್ನು ಪ್ರತಿ ಮಾಹೆ 200 ಲೀಟರ್‌ನಂತೆ ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಯಿಂದ ಹಂಚಿಕೆ ಮಾಡುತ್ತಿದ್ದು, 2013–14ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮೀನುಗಾರಿಕೆ ಇಲಾಖೆಯ ಅವಶ್ಯವಿರುವ ಸೀಮೆಎಣ್ಣೆ ಪ್ರಮಾಣವನ್ನು 400 ಲೀಟರ್‌ಗೆ ಹೆಚ್ಚಿಸಲಾಗುವುದೆಂದು ಘೋಷಿಸಲಾಗಿದ್ದು, ಅದರಂತೆ, ಕ್ರಮ ಕೈಗೊಳ್ಳಲು ಪ್ರಸ್ತಾಪಿಸಲಾಗಿದೆ.

ಸರ್ಕಾರವು ಮೀನುಗಾರಿಕೆ ಇಲಾಖೆಯ ಪ್ರಸ್ತಾವನೆಯನ್ನು ಪರಿಶೀಲಿಸಿದ್ದು, ಕೇಂದ್ರ ಸರ್ಕಾರವು ಪ್ರಸ್ತುತ ಪಡಿತರ ಚೀಟಿಗಳಿಗೆ ಹಂಚಿಕೆ ಮಾಡುವ ಸೀಮೆಎಣ್ಣೆ ಪ್ರಮಾಣವನ್ನು ಗಮನದಲ್ಲಿಟ್ಟುಕೊಂಡು, ರಾಜ್ಯದಲ್ಲಿನ 4214 ಯಾಂತ್ರೀಕೃತ ಮೀನುಗಾರಿಕೆ ದೋಣಿಗಳಿಗೆ ಪ್ರತಿ ಮಾಹೆಗೆ 300 ಲೀಟರ್ ಸೀಮೆಎಣ್ಣೆಯನ್ನು ಹಂಚಿಕೆ ಮಾಡಲು ನಿರ್ಧರಿಸಿದೆ ಅದರಂತೆ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಆನಾಸ 119 ಡಿಆರ್‌ಎ 2012, ಬೆಂಗಳೂರು, ದಿನಾಂಕ:23.10.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮೀನುಗಾರಿಕೆ ಇಲಾಖೆಯ ವ್ಯಾಪ್ತಿಯಲ್ಲಿ ಒಳಪಡುವ ಪ್ರಸ್ತುತ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯಿಂದ ಸಬ್ಸಿಡಿಯುಕ್ತ ಸೀಮೆಎಣ್ಣೆ ಪಡೆಯುತ್ತಿರುವ 4514 (ಉತ್ತರ ಕನ್ನಡ ಜಿಲ್ಲೆಯ 990, ದಕ್ಷಿಣ ಕನ್ನಡ ಜಿಲ್ಲೆಯ 2610 ಹಾಗೂ ಉಡುಪಿ ಜಿಲ್ಲೆಯ 914) ಯಾಂತ್ರೀಕೃತ ಮೀನುಗಾರಿಕೆ ದೋಣಿಗಳಿಗೆ ಸೀಮೆಎಣ್ಣೆ ಪ್ರಮಾಣವನ್ನು ಪ್ರತಿ ಮಾಹೆಗೆ ಪ್ರತಿ ದೋಣಿಗೆ 300 ಲೀಟರ್‌ಗಳಿಗೆ ಹೆಚ್ಚಿಸಿ, ನವೆಂಬರ್ 2013 ರಿಂದ ಪ್ರತಿ ಲೀಟರ್‌ಗೆ ರೂ.16.50ರ ದರದಲ್ಲಿ ವಿತರಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

PR-20
SC-200

## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** "ಪಡಿತರ ಖಾತರಿ" ಯೋಜನೆ – ಸಾರ್ವಜನಿಕ ವಿತರಣಾ ಪದ್ಧತಿ ಯೋಜನೆಯ ಆಹಾರ ಧಾನ್ಯಗಳನ್ನು ನ್ಯಾಯಬೆಲೆ ಅಂಗಡಿಗಳಲ್ಲಿ ಪಡಿತರ ಚೀಟಿದಾರರಿಗೆ ಮಾಹೆಯ ನಿಯಮಿತ ದಿನಗಳಲ್ಲಿ ಲಭ್ಯವಾಗುವಂತೆ ಖಾತರಿಗೊಳಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆನಾಸ ಇವರ ಪತ್ರ ಸಂಖ್ಯೆ. ಸಿಎಫ್‌ಎಸ್/ಎಫ್‌ಪಿಡಿ/IV/9/8/102/2013–14 ದಿನಾಂಕ. 16.09.2013

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರ ಪತ್ರದಲ್ಲಿ ಸಾರ್ವಜನಿಕ ವಿತರಣಾ ಪದ್ಧತಿಯಡಿ ಅಕ್ಕಿ, ಗೋಧಿ, ಸಕ್ಕರೆ ಮತ್ತು ಸೀಮೆಎಣ್ಣೆಯನ್ನು ಪಡಿತರ ಚೀಟಿದಾರರಿಗೆ ವಿತರಣೆ ಮಾಡಲಾಗುತ್ತಿದೆ. ಪ್ರಸ್ತುತ ಈ ನಾಲ್ಕು ಪಡಿತರ ಪದಾರ್ಥಗಳು ಕೆಲವು ನ್ಯಾಯಬೆಲೆ ಅಂಗಡಿಗಳಿಗೆ ನಿಗದಿತ ದಿನಾಂಕದಂದು ತಲುಪದೇ ವಿವಿಧ ದಿನಾಂಕಗಳಂದು ತಲುಪುತ್ತಿದೆ. ಇದರಿಂದಾಗಿ ಪಡಿತರ ಚೀಟಿದಾರರು ನ್ಯಾಯಬೆಲೆ ಅಂಗಡಿಗಳಿಗೆ ಪಡಿತರ ಪದಾರ್ಥಗಳನ್ನು ಪಡೆಯಲು ಹಲವಾರು ಬಾರಿ ಭೇಟಿ ನೀಡಬೇಕಾಗಿದ್ದು ತೊಂದರೆಗೊಳಗಾಗಿರುತ್ತಾರೆ. ಈ ಹಿನ್ನೆಲೆಯಲ್ಲಿ ಪಡಿತರ ಚೀಟಿದಾರರ ಹಿತದೃಷ್ಠಿಯಿಂದ ವಿತರಣಾ ವ್ಯವಸ್ಥೆಯನ್ನು ಸುಧಾರಿಸುವುದು ಸೂಕ್ತವೆಂದು ಕಂಡುಬಂದಿದೆ.

ಮುಂಬರುವ ದಿನಗಳಲ್ಲಿ ರಾಜ್ಯದಲ್ಲಿ ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆಯು ಜಾರಿಗೆ ಬರಲಿದ್ದು, ಸದರಿ ಕಾಯ್ದೆಯನ್ವಯ ಅರ್ಹ ನಾಗರಿಕರಿಗೆ ಪಡಿತರ ಚೀಟಿಗಳನ್ನು ನೀಡಿದ್ದರೂ ಸಹ ಅವರಿಗೆ ನ್ಯಾಯಬೆಲೆ ಅಂಗಡಿಯಲ್ಲಿ ಸಮಯಕ್ಕೆ ಸರಿಯಾಗಿ ಆಹಾರ ಪದಾರ್ಥಗಳು ದೊರಯದೇ ವಂಚಿತರಾದಲ್ಲಿ ಅಂತಹವರಿಗೆ ರಾಜ್ಯ ಸರ್ಕಾರವು ಪರಿಹಾರವನ್ನು ನೀಡಬೇಕಾಗುತ್ತದೆ.

ಸಾರ್ವಜನಿಕ ವಿತರಣಾ ಪದ್ಧತಿಯನ್ನು ಪರಿಣಾಮಕಾರಿಯಾಗಿ ಬಲಪಡಿಸಲು ನ್ಯಾಯಬೆಲೆ ಅಂಗಡಿಗಳಿಂದ ವಿತರಣಾ ಪದ್ಧತಿಯನ್ನು ನಿಯಮಬದ್ಧವಾಗಿ ಅನುಷ್ಠಾನಗೊಳಿಸಬೇಕಾಗಿರುವುದರಿಂದ ಪ್ರತಿ ತಿಂಗಳ ನಿಗದಿತ ದಿನಗಳಂದು ಅಂಗಡಿಗಳನ್ನು ತೆರೆದು ಆಹಾರ ಪದಾರ್ಥಗಳ ವಿತರಣೆಯನ್ನು ನಿಗದಿತ ಸಮಯದಲ್ಲಿ ಕಾರ್ಯಗತಗೊಳಿಸುವಂತೆ ಮಾಡುವುದು ಸೂಕ್ತವಾಗಿರುತ್ತದೆ. ಆದ್ದರಿಂದ ಪಡಿತರ ಚೀಟಿದಾರರಿಗೆ ಪ್ರತಿ ಮಾಹೆಯ ನಿಗದಿತ ದಿನಾಂಕಗಳಂದು ಹಾಗೂ ನಿಗದಿತ ಸಮಯದಲ್ಲಿ ವಿತರಣೆ ಮಾಡುವ ಬಗ್ಗೆ ಖಾತರಿ ಪಡಿಸುವುದು ಸೂಕ್ತವೆಂದು ಕಂಡುಬಂದ ಹಿನ್ನೆಲೆಯಲ್ಲಿ ಪ್ರತಿ ಮಾಹೆಯ ದಿನಾಂಕ. 1 ರಿಂದ 10ನೇ ತಾರೀಖಿನ ಅವಧಿಯನ್ನು "ಪಡಿತರ ಖಾತರಿ" ಅವಧಿಯೆಂದು ಪರಿಗಣಿಸಲು ಉದ್ದೇಶಿಸಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ್ದು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 368 ಡಿಆರ್‌ಎ 2013, ಬೆಂಗಳೂರು, ದಿನಾಂಕ: 18ನೇ ಡಿಸೆಂಬರ್, 2013**

ಸಾರ್ವಜನಿಕ ವಿತರಣಾ ಪದ್ಧತಿಯಡಿಯಲ್ಲಿ ವಿತರಿಸಲಾಗುತ್ತಿರುವ ಆಹಾರ ಧಾನ್ಯಗಳನ್ನು ನ್ಯಾಯಬೆಲೆ ಅಂಗಡಿಗಳಲ್ಲಿ ಫೆಬ್ರವರಿ–2014 ರಿಂದ ಜಾರಿಗೆ ಬರುವಂತೆ ಯೋಜನೆಯನ್ನು "ಪಡಿತರ ಖಾತರಿ" ಎಂಬ ಶೀರ್ಷಿಕೆಯೊಂದಿಗೆ ಅನುಷ್ಠಾನಗೊಳಿಸಿದೆ.

"ಪಡಿತರ ಖಾತರಿ" ಅವಧಿಯು ಪ್ರತಿ ಮಾಹೆಯ ದಿನಾಂಕ. 1 ರಿಂದ 10 ರವರೆಗೆ ಇದ್ದು, ಆ ದಿನಾಂಕಗಳಂದು ಪಡಿತರ ಚೀಟಿದಾರರಿಗೆ ನ್ಯಾಯಬೆಲೆ ಅಂಗಡಿಗಳಲ್ಲಿ ಆಹಾರ ಧಾನ್ಯಗಳನ್ನು ವಿತರಿಸಲು ಈ ಕೆಳಕಂಡ ಕ್ರಮಗಳನ್ನು ಅನುಸರಿಸುವಂತೆ ಆದೇಶಿಸಲಾಗಿದೆ.

ಅ) ಫೆಬ್ರವರಿ 1, 2014 ರಿಂದ "ಪಡಿತರ ಖಾತರಿ" ಯನ್ನು (ಸಾರ್ವಜನಿಕ ವಿತರಣಾ ಪದ್ಧತಿಯಡಿ ಆಹಾರ ಧಾನ್ಯಗಳನ್ನು ಮಾಹೆಯ ನಿಗದಿತ ದಿನಾಂಕಗಳಂದು ವಿತರಿಸುವ ಬಗ್ಗೆ ಖಾತರಿ) ಜಾರಿಗೊಳಿಸುವುದು.

ಆ) "ಪಡಿತರ ಖಾತರಿ" ಅವಧಿಯು ಪ್ರತಿ ಮಾಹೆಯ 1ನೇ ತಾರೀಖಿನಿಂದ 10ನೇ ತಾರೀಖಿನವರೆಗೆ ಇರುತ್ತದೆ.

ಇ) "ಪಡಿತರ ಖಾತರಿ"ಯ ಅವಧಿಯಲ್ಲಿ ನ್ಯಾಯಬೆಲೆ ಅಂಗಡಿಗಳು ಈ ಹಿಂದೆ ಕಾರ್ಯನಿರ್ವಹಿಸುತ್ತಿದ್ದ ವೇಳಾಪಟ್ಟಿ ಬೆಳಗ್ಗೆ 8.00 ರಿಂದ 12.00 ಸಂಜೆ 4.00 ರಿಂದ 8.00ರ ಬದಲಿಗೆ ಬೆಳಗ್ಗೆ 8.00 ಘಂಟೆಯಿಂದ ರಾತ್ರಿ 8.00 ಘಂಟೆ ತನಕ (ಊಟದ ವೇಳೆ ಮದ್ಯಾಹ್ನ 1.00 ಘಂಟೆಯಿಂದ 2.00 ಘಂಟೆಯನ್ನು ಹೊರತುಪಡಿಸಿ) ಕಾರ್ಯನಿರ್ವಹಿಸುವುದು.

ಈ) ರಾಜ್ಯ ಸರ್ಕಾರದ ರಜೆಗಳನ್ನು ಹೊರತುಪಡಿಸಿ ಮಾಹೆಯ ಮೊದಲ 10 ದಿನಗಳಂದು (ಮಂಗಳವಾರವೂ ಒಳಗೊಂಡಂತೆ) ನ್ಯಾಯಬೆಲೆ ಅಂಗಡಿಗಳಿಗೆ ರಜೆ ಇರುವುದಿಲ್ಲ.

ಉ) ನ್ಯಾಯಬೆಲೆ ಅಂಗಡಿ ಹಾಗೂ ಸಗಟು ಮಳಿಗೆದಾರರ ಎತ್ತುವಳಿ ಕಾರ್ಯದ ವೇಳಾ ಪಟ್ಟಿಯನ್ನು 1 ರಿಂದ 10ರ ವರೆಗೆ ವಿತರಣೆ ಕಾರ್ಯದ ಖಾತರಿಗನುಗುಣವಾಗಿ ಬದಲಾಯಿಸುವುದು.

ಊ) "ಪಡಿತರ ಖಾತರಿ" ಸೇವೆಯು ಅಕ್ಕಿ, ಗೋಧಿ ಹಾಗೂ ಸಕ್ಕರೆಗೆ ಮಾತ್ರ ಅನ್ವಯಿಸುತ್ತದೆ.

ಋ) "ಪಡಿತರ ಖಾತರಿ" ಯೋಜನೆ ಕುರಿತು ಸಾರ್ವಜನಿಕರಿಗೆ ಪ್ರಸಾರ ಮಾಧ್ಯಮಗಳಲ್ಲಿ ವ್ಯಾಪಕ ಪ್ರಚಾರ ನೀಡುವುದು ಹಾಗೂ ನ್ಯಾಯಬೆಲೆ ಅಂಗಡಿಗಳಿಗೆ/ಸಗಟು ನಾಮಿನಿದಾರರಿಗೆ ಸೂಕ್ತ ತಿಳುವಳಿಕೆ ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**PR-44**
**SC-200**

## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ: ಆನಾಸ 119 ಡಿಆರ್‌ಎ 2012 ಬೆಂಗಳೂರು, ದಿನಾಂಕ: 21.11.2013**

ಸರ್ಕಾರದ ಆದೇಶ ಸಂಖ್ಯೆ: ಆನಾಸ 119 ಡಿಆರ್‌ಎ 2013, ದಿನಾಂಕ: 23.10.2013ರ ಆದೇಶ ಭಾಗದಲ್ಲಿ "ಮೀನುಗಾರಿಕೆ ಇಲಾಖೆಯ ವ್ಯಾಪ್ತಿಯಲ್ಲಿ ಒಳಪಡುವ ಪ್ರಸ್ತುತ ಆಹಾರ, ನಾಗರಿಕ ಸರಬರಾಜು ಗ್ರಾಹಕ ವ್ಯವಹಾರಗಳ ಇಲಾಖೆಯಿಂದ ಸಬ್ಸಿಡಿಯುಕ್ತ ಸೀಮೆಎಣ್ಣೆ ಪಡೆಯುತ್ತಿರುವ 4514 (ಉತ್ತರ ಕನ್ನಡ ಜಿಲ್ಲೆಯ 990, ದಕ್ಷಿಣ ಕನ್ನಡ ಜಿಲ್ಲೆಯ 2610 ಹಾಗೂ ಉಡುಪಿ ಜಿಲ್ಲೆಯ 914) ಯಾಂತ್ರೀಕೃತ ಮೀನುಗಾರಿಕಾ ದೋಣಿಗಳಿಗೆ ಎಂಬುದರ ಬದಲಾಗಿ, "(ಉತ್ತರ ಕನ್ನಡ ಜಿಲ್ಲೆಯ 990, ದಕ್ಷಿಣ ಕನ್ನಡ ಜಿಲ್ಲೆಯ 914 ಹಾಗೂ ಉಡುಪಿ ಜಿಲ್ಲೆಯ 2610) ಯಾಂತ್ರೀಕೃತ ಮೀನುಗಾರಿಕಾ ದೋಣಿಗಳಿಗೆ ಎಂದು ತಿದ್ದಿ ಓದಿಕೊಳ್ಳತಕ್ಕದ್ದು" ಹಾಗೂ ಸರ್ಕಾರದ ಆದೇಶ ಸಂಖ್ಯೆ:ಆನಾಸ 119 ಡಿಆರ್‌ಎ 2013, ದಿನಾಂಕ: 23.10.2013ರ ಬದಲಾಗಿ "ಆನಾಸ 119 ಡಿಆರ್‌ಎ 2012, ದಿನಾಂಕ: 23.10.2013 ಎಂದು ತಿದ್ದಿ ಓದಿಕೊಳ್ಳತಕ್ಕದ್ದು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**PR-21**
**SC-200**

## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಬೆಂಗಳೂರು ಮತ್ತು ಇತರ ನಗರಸಭೆ ಪ್ರದೇಶಗಳಲ್ಲಿ ಪಡಿತರ ಚೀಟಿಗೆ ಅರ್ಜಿಗಳನ್ನು ಸ್ವೀಕರಿಸಲು ನೇಮಕವಾಗಿರುವ ಖಾಸಗಿ ಫ್ರಾಂಚೈಸೀ ಸೆಂಟರ್‌ಗಳನ್ನು ಮುಚ್ಚುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಇವರ ಪತ್ರ ಸಂಖ್ಯೆ: ಸಿಎಫ್‌ಎಸ್: ಎಎಂಸಿ:2:2012–13, ದಿನಾಂಕ: 21–11–2013.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು ಇವರು ಮತ್ತು ಇತರ ನಗರಸಭೆ ಪ್ರದೇಶಗಳಲ್ಲಿ ಪಡಿತರ ಚೀಟಿಗಾಗಿ ಅರ್ಜಿಗಳನ್ನು ಸ್ವೀಕರಿಸಲು ಖಾಸಗಿ ಫ್ರಾಂಚೈಸೀ ಸೆಂಟರ್‌ಗಳಿಗೆ ಅಧಿಕಾರ ನೀಡಿ, ಅರ್ಜಿಗಳ

ಸಂಸ್ಕರಣೆಗೆ ರೂ. 50/– ಗಳನ್ನು ನಿಗದಿಪಡಿಸಲಾಗಿತ್ತು. ಆದರೆ ಸದರಿ ಪ್ರಾಂಚೈಸೀಗಳು ಸಾರ್ವಜನಿಕರಿಂದ ರೂ. 500/– ರಿಂದ ರೂ. 2,000/– ದವರೆಗೆ ಹಣ ವಸೂಲಿ ಮಾಡುವುದು, ನಕಲಿ ಪಡಿತರ ಚೀಟಿಗಳನ್ನು ಸೃಷ್ಟಿಸುವುದು ಇತ್ಯಾದಿ ಅವ್ಯವಹಾರಗಳಲ್ಲಿ ತೊಡಗಿರುವ ಬಗ್ಗೆ ಪ್ರಸ್ತಾಪಿಸಿರುತ್ತಾರೆ.

ಮುಂದುವರೆದು ಪಡಿತರ ಚೀಟಿಗಾಗಿ ಅರ್ಜಿಗಳನ್ನು ಸ್ವೀಕರಿಸಲು ಇಲಾಖೆಯುಇ–ಆಡಳಿತ ಕೇಂದ್ರದ ಸಹಯೋಗದೊಂದಿಗೆ Bangalore-one ಕೇಂದ್ರದಲ್ಲಿ 100 ಕಿಯೋಸ್ಕ್‌ಗಳನ್ನು ಹಾಗೂ ಕರ್ನಾಟಕ–Oneನಲ್ಲಿ 36 ಕಿಯೋಕ್ಸ್‌ಗಳನ್ನು ತೆರೆಯಲಾಗಿದ್ದು, ಸದರಿ ಕಿಯೋಕ್ಸ್‌ಗಳು ಸಮರ್ಪಕವಾಗಿ ಕಾರ್ಯನಿರ್ವಹಿಸುತ್ತಿರುವುದಾಗಿ ತಿಳಿಸುತ್ತಾ, ಬೆಂಗಳೂರು ಹಾಗೂ ಇತರ ಏಳು ನಗರ ಸಭೆ ಪ್ರದೇಶಗಳಲ್ಲಿ ಪಡಿತರ ಚೀಟಿಗೆ ಅರ್ಜಿಗಳನ್ನು ಸ್ವೀಕರಿಸಲು ನೇಮಕವಾಗಿರುವ ಖಾಸಗಿ ಪ್ರಾಂಚೈಸೀ ಸೆಂಟರ್‌ಗಳನ್ನು ಕೂಡಲೇ ಮುಚ್ಚಿಸುವ ಬಗ್ಗೆ ಕ್ರಮ ತೆಗೆದುಕೊಳ್ಳುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದ್ದು, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 501 ಡಿಆರ್‌ಎ 2013, ಬೆಂಗಳೂರು, ದಿನಾಂಕ: 12–12–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಂಗಳೂರು ಮತ್ತು ಇತರ ಏಳು ನಗರಸಭೆ ಪ್ರದೇಶಗಳಲ್ಲಿ ಪಡಿತರ ಚೀಟಿಗೆ ಅರ್ಜಿಗಳನ್ನು ಸ್ವೀಕರಿಸಲು ನೇಮಕವಾಗಿದ್ದ ಖಾಸಗಿ ಪ್ರಾಂಚೈಸೀ ಸೆಂಟರ್‌ಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮುಚ್ಚಿಸಲು ಆದೇಶಿಸಿದೆ.

ಬೆಂಗಳೂರು ಹಾಗೂ ಇತರ ಏಳು ನಗರ ಸಭೆ ಪ್ರದೇಶಗಳಲ್ಲಿ ಪಡಿತರ ಚೀಟಿಗಾಗಿ ಅರ್ಜಿ ಸಲ್ಲಿಸುವ ಸಾರ್ವಜನಿಕರು ಇನ್ನು ಮುಂದೆ ಬೆಂಗಳೂರು– one ಹಾಗೂ ಕರ್ನಾಟಕ–One ಕೇಂದ್ರಗಳಲ್ಲಿ ಮಾತ್ರ ಅರ್ಜಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್.ಬಿ. ಕೃಷ್ಣಪ್ಪನವರ್**
ಸರ್ಕಾರದ ಉಪ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**PR-45**
**SC-200**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಬಿ.ಎಸ್. ಪ್ರಕಾಶ್‌ಬಾಬು, ಹೆಚ್‌ಸಿ–803, ಆರ್.ಟಿ. ನಗರ ಸಂಚಾರ ಪೊಲೀಸ್ ಠಾಣೆ, ಬೆಂಗಳೂರು ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಆಯುಕ್ತರು, ಸಂಚಾರ, ಪಶ್ಚಿಮ ವಿಭಾಗ, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ: ಸಿಬ್ಬಂದಿ(1)/01/ಡಿಇ/ಆರ್–6/ಸಂ.ಪ/2006–07 ದಿನಾಂಕ 07.03.2011
2) ಮೇಲ್ಮನವಿ ಪ್ರಾಧಿಕಾರ ಹಾಗೂ ಅಪರ ಪೊಲೀಸ್ ಕಮೀಷನರ್, ಸಂಚಾರ, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ: 202/ಅಪೀಲು/ಅಪರ ಸಿಪಿ/ಸಂಚಾರ/2011, ಬೆಂಗಳೂರು ದಿನಾಂಕ 21.11.2011
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 22.04.2012
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)9/2012–13 ದಿನಾಂಕ 27.06.2012, 26.09.2012, 20.06.2013, 25.07.2013
5) ಕಾರಣ ಕೇಳುವ ನೋಟೀಸು ಸಂಖ್ಯೆ: ಒಇ 40 ಪೊಸಿಅ 2012 ದಿನಾಂಕ 12.06.2013
6) ಕಾರಣ ಕೇಳುವ ನೋಟೀಸಿಗೆ ಅರ್ಜಿದಾರರ ಸಮಜಾಯಿಷಿ ದಿನಾಂಕ: 15.07.2013
7) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 135 ಸಿಎನ್‌ಎಸ್ 2013 ದಿನಾಂಕ: 29.10.2013

**ಪ್ರಸ್ತಾವನೆ:**

ಶ್ರೀ ಬಿ.ಎಸ್. ಪ್ರಕಾಶ್‌ಬಾಬು, ಹೆಚ್‌ಸಿ–803, ಆರ್.ಟಿ. ನಗರ ಸಂಚಾರ ಪೊಲೀಸ್ ಠಾಣೆ, ಬೆಂಗಳೂರು ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಲಂಚ ನಿರೋಧಕ ಕಾಯ್ದೆಯಡಿ ಪ್ರಕರಣ ದಾಖಲಿಸಿದ ಹಿನ್ನಲೆಯಲ್ಲಿ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಡಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಪ್ರಕಾಶ್ ಬಾಬು ಹೆಚ್.ಸಿ. 803, ಆರ್.ಟಿ. ನಗರ ಸಂಚಾರ ಪೊಲೀಸ್ ಠಾಣೆ, ಬೆಂಗಳೂರು ನಗರ ರವರು ದಿನಾಂಕ: 24.07.2006ರಂದು ತಮ್ಮ ಕರ್ತವ್ಯದಲ್ಲಿ ಇರುವಾಗ್ಗೆ ಬೆಂಗಳೂರು ನಗರ ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ ಗುನ್ನೆ ಸಂಖ್ಯೆ: 24/06ರಲ್ಲಿ ಲಂಚ ನಿರೋಧಕ ಕಾಯ್ದೆ–1988 ಕಲಂ.7, 13ಎ ಜೊತೆಯಲ್ಲಿ 13(2)ರ ಅಡಿಯಲ್ಲಿ ಪ್ರಕರಣ ದಾಖಲಿಸಿಕೊಂಡಿರುವುದರ ಪ್ರಯುಕ್ತ ದೋಷಾರೋಪಣೆ ಆರೋಪ ಹೊರಿಸಲಾಗಿದೆ"

ಇಲಾಖಾ ವಿಚಾರಣೆಯಲ್ಲಿ ಇವರ ವಿರುದ್ದದ ಆರೋಪವು ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯಪಟ್ಟಿದ್ದು ಅದರನ್ವಯ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಆಯುಕ್ತರು, ಸಂಚಾರ, ಪಶ್ಚಿಮ ವಿಭಾಗ, ಬೆಂಗಳೂರು ನಗರ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ 07.03.2011ರ ಆದೇಶದಲ್ಲಿ ಅರ್ಜಿದಾರರ ಒಂದು ವೇತನ ಬಡ್ತಿಯನ್ನು ಒಂದು ವರ್ಷದ ಅವಧಿಯವರೆಗೆ ಮುಂದಿನ ವೇತನ ಬಡ್ತಿಗೆ ಧಕ್ಕೆಯಾಗದಂತೆ ಮುಂದೂಡುವ ದಂಡನೆಯನ್ನು ವಿಧಿಸಿ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಮೇಲ್ಮನವಿ ಪ್ರಾಧಿಕಾರ ಹಾಗೂ ಅಪರ ಪೊಲೀಸ್ ಕಮೀಷನರ್, ಸಂಚಾರ, ಬೆಂಗಳೂರು ನಗರ ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 21.11.2011ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶದ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ಅರ್ಜಿದಾರರ ವಿರುದ್ಧದ ಆರೋಪವು ಸಾಬೀತಾಗಿರುತ್ತದೆ. ಅರ್ಜಿದಾರರು ಹೆಡ್ ಕಾನ್ಸ್‌ಟೇಬಲ್ ಹುದ್ದೆಯ ಗರಿಷ್ಠ ವೇತನವನ್ನು ತಲುಪಿದ್ದು ಎರಡು ಸ್ಥಗಿತ ವೇತನ ಬಡ್ತಿಯನ್ನು ಪಡೆದಿರುತ್ತಾರೆ. ಸರ್ಕಾರದ ಸುತ್ತೋಲೆ ಸಂಖ್ಯೆ ಡಿಪಿಎಆರ್ 14 ಎಸ್‌ಡಿಇ 1985 ದಿನಾಂಕ 25.07.1985ರಲ್ಲಿ ಸಾಮಾನ್ಯ ವೇತನ ಬಡ್ತಿಯನ್ನಲ್ಲದೇ ಬೇರಾವುದೇ ವೇತನ ಬಡ್ತಿಯನ್ನು ದಂಡನೆಯ ರೂಪದಲ್ಲಿ ತಡೆಹಿಡಿಯಬಾರದೆಂದು ತಿಳಿಸಿರುವ ಹಿನ್ನಲೆಯಲ್ಲಿ ಶಿಸ್ತು ಪ್ರಾಧಿಕಾರದ ಆದೇಶವು ತಾಂತ್ರಿಕ ದೋಷದಿಂದ ಕೂಡಿದ್ದು ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಡಿಸಿ ಕರ್ನಾಟಕ ಪೊಲೀಸ್ ಕಾಯ್ದೆಯ ಸೆಕ್ಷನ್ 23(1)b(i)ರನ್ವಯ ಇವರ ವೇತನವನ್ನು ಒಂದು ವರ್ಷದ ಅವಧಿಗೆ ಇವರು ಪ್ರಸ್ತುತ ಪಡೆಯುತ್ತಿರುವ ವೇತನ ಶ್ರೇಣಿಯ ಕೆಳಗಿನ ಹಂತಕ್ಕೆ ಸಂಚಿತ ಪರಿಣಾಮ ಬೀರದಂತೆ ಕೆಳಗಿಳಿಸುವ ದಂಡನೆಯನ್ನು ವಿಧಿಸುವ ಕುರಿತಂತೆ ಪರಿಷ್ಕರಣ ಮೇಲ್ಮನವಿದಾರರಿಗೆ ಉಲ್ಲೇಖ (5)ರಲ್ಲಿ ಕಾರಣ ಕೇಳುವ ನೋಟೀಸನ್ನು ನೀಡಲಾಗಿದ್ದು, ಮೇಲೆ ಕ್ರಮ ಸಂಖ್ಯೆ (6)ರಲ್ಲಿ ಓದಲಾದ ಪರಿಷ್ಕರಣ ಮೇಲ್ಮನವಿದಾರರ ಸಮಜಾಯಿಷಿಯಲ್ಲಿ ಯಾವುದೇ ಹೊಸ ಸಮರ್ಥನೀಯ ಅಂಶಗಳು ಇರುವುದಿಲ್ಲ.

ಈ ಅಂಶಗಳ ಹಿನ್ನಲೆಯಲ್ಲಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಡಿಸಿ ಪರಿಷ್ಕೃತ ದಂಡನೆಯನ್ನು ವಿಧಿಸುವ ಕುರಿತಂತೆ ಓದಲಾದ ಕ್ರಮ ಸಂಖ್ಯೆ (7)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ಒಇ 40 ಪೊಸಿಅ 2012 ಬೆಂಗಳೂರು, ದಿನಾಂಕ: 14.11.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬಿ.ಎಸ್. ಪ್ರಕಾಶ್‌ಬಾಬು, ಹೆಚ್‌ಸಿ–803, ಆರ್.ಟಿ. ನಗರ ಸಂಚಾರ ಪೊಲೀಸ್ ಠಾಣೆ, ಬೆಂಗಳೂರು ಇವರಿಗೆ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನಾದೇಶವನ್ನು ಮಾರ್ಪಡಿಸಿ ಕರ್ನಾಟಕ ಪೊಲೀಸ್ ಕಾಯ್ದೆಯ ಸೆಕ್ಷನ್ 23(1)b(i)ರನ್ವಯ ಇವರ ವೇತನವನ್ನು ಒಂದು ವರ್ಷದ ಅವಧಿಗೆ ಇವರು ಪ್ರಸ್ತುತ ಪಡೆಯುತ್ತಿರುವ ವೇತನ ಶ್ರೇಣಿಯ ಕೆಳಗಿನ ಹಂತಕ್ಕೆ ಸಂಚಿತ ಪರಿಣಾಮ ಬೀರದಂತೆ ಕೆಳಗಿಳಿಸಿ ಆದೇಶಿಸಿದೆ. ಅಮಾನತ್ತಿನ ಆದೇಶವನ್ನು ಅಮಾನತ್ತೆಂದೇ ಪರಿಗಣಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR-1234**
**SC-30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಸ್. ಜಯಪ್ಪ, ಎಪಿಸಿ–173, ಡಿ.ಎ.ಆರ್., ದಾವಣಗೆರೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ(5)/ಪಿಆರ್/93/2012 (ಓ.ಬಿ. ಸಂಖ್ಯೆ: 735/2012) ದಿನಾಂಕ 24.03.2012
2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರ ಆದೇಶ ಸಂಖ್ಯೆ 65/ಅಪೀಲು/ಸಿಬ್ಬಂದಿ–2/2012–13 (ಓ.ಬಿ. ಸಂಖ್ಯೆ: 70/2012–13) ದಿನಾಂಕ 26.07.2012
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 19.10.2012
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)49/2012–13 ದಿನಾಂಕ 25.07.2013
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 148 ಸಿಎನ್‌ಎಸ್ 2013 ದಿನಾಂಕ: 02.12.2013

**ಪ್ರಸ್ತಾವನೆ:**

ಶ್ರೀ ಎಸ್. ಜಯಪ್ಪ, ಎಪಿಸಿ–173, ಡಿ.ಎ.ಆರ್., ದಾವಣಗೆರೆ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯದಲ್ಲಿ ನಿರ್ಲಕ್ಷ್ಯತನ, ಬೇಜವಾಬ್ದಾರಿತನ ಮತ್ತು ದುರ್ನಡತೆಯನ್ನು ತೋರಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಎನ್.ಜಯಪ್ಪ, ಎಪಿಸಿ–173 ಆದ ನೀವು ಸಿಪಿಐ ಕೇಂದ್ರ ವೃತ್ತರವರ ವಾಹನ ಚಾಲಕರಾಗಿ, ಕರ್ತವ್ಯ ನಿರ್ವಹಿಸುತ್ತಿದ್ದು ಯಾವುದೇ ಸರ್ಕಾರಿ ನೌಕರನು ತಾನು ರಜೆಯ ಮೇಲೆ ತೆರಳುವ ಮುನ್ನ ಸಾಕಷ್ಟು ಮುಂಚಿತವಾಗಿ ಮಂಜೂರಾತಿ ಪ್ರಾಧಿಕಾರಕ್ಕೆ ರಜೆಯನ್ನು ಕೋರಿ ಮನವಿ ಸಲ್ಲಿಸಿ, ರಜೆ ಮಂಜೂರಾತಿಯನ್ನು ಪಡೆದುಕೊಂಡು ನಂತರ ರಜೆ ಮೇಲೆ ಹೋಗಬೇಕೆಂದು ಮತ್ತು ರಜೆಯನ್ನು ಹಕ್ಕೆಂದು ಸಾಧಿಸಲಾಗದೆಂದು ಕೆ.ಸಿ.ಎಸ್. ನಿಯಮಗಳಿದ್ದು, ನಿಮ್ಮ ಮೇಲಾಧಿಕಾರಿಗಳಾದ ಸಿಪಿಐ ಕೇಂದ್ರ ವೃತ್ತರವರು ನಿಮ್ಮನ್ನು ದಿನಾಂಕ 28.08.2011ರಂದು ಮಧ್ಯಾಹ್ನ ಚನ್ನಗಿರಿ ಸಿಪಿಐರವರ ಮುಂದೆ ವಿಚಾರಣೆಗೆ ಹಾಜರಾಗಿ ನಂತರ ವಾಪಸ್ಸು ಬಂದು ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವಂತೆ ಸೂಕ್ತ ನಿರ್ದೇಶನ ನೀಡಿ ಕಳುಹಿಸಿದ್ದು ಆದರೆ ನೀವು ಸಿಪಿಐ ಚನ್ನಗಿರಿ ವೃತ್ತರವರ ಬಳಿ ವರದಿ ಮಾಡಿಕೊಳ್ಳದೆ ಮತ್ತು ನೀವು ಕರ್ತವ್ಯ ನಿರ್ವಹಿಸುತ್ತಿರುವ ಸಿಪಿಐ ಕೇಂದ್ರ ವೃತ್ತರವರಲ್ಲಿಯೂ ಸಹ ಕರ್ತವ್ಯಕ್ಕೆ ವರದಿ

ಮಾಡಿಕೊಳ್ಳದೆ, ನಿಮ್ಮ ಇರುವಿಕೆಯ ಬಗ್ಗೆ ಯಾವುದೇ ಮಾಹಿತಿಯನ್ನು ನೀಡದೇ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿ ನಿಮ್ಮ ಆದ್ಯ ಕರ್ತವ್ಯದಲ್ಲಿ ಘೋರ ನಿರ್ಲಕ್ಷತನವನ್ನು ಮತ್ತು ಬೇಜವಾಬ್ದಾರಿತನ ಮತ್ತು ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ"

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 24.03.2012ರ ಆದೇಶದಲ್ಲಿ ಇವರಿಗೆ "ಎಚ್ಚರಿಕೆ"ನೀಡಿ ಅಮಾನತ್ತಿನ ಅವಧಿ ದಿನಾಂಕ 09.09.2011ರಿಂದ 25.01.2012ರವರೆಗೆ ಒಟ್ಟು 139 ದಿನಗಳನ್ನು ಅಮಾನತ್ತೆಂದು ಪರಿಗಣಿಸಿ, ದಿನಾಂಕ 28.08.2011ರಿಂದ 08.09.2011ರವರೆಗೆ ಒಟ್ಟು 12 ದಿನ ಗೈರು ಹಾಜರಿ ಅವಧಿ ದಿನಗಳನ್ನು ಕೆ.ಸಿ.ಎಸ್.ನಿಯಮ 106(ಎ) ಅನ್ವಯ "ವೇತನ ರಹಿತ ರಜೆ" ಎಂದು ಪರಿಗಣಿಸಲಾದ ದಂಡನೆಯನ್ನು ವಿಧಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 26.07.2012ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಬೇರಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಆದರೆ ಪೊಲೀಸ್ ಅಧಿಕಾರಿ / ಸಿಬ್ಬಂದಿಗೆ ದಂಡನೆಯನ್ನು ಕರ್ನಾಟಕ ಪೊಲೀಸ್ ಅಧಿನಿಯಮಗಳಡಿಯಲ್ಲಿ ವಿಧಿಸಬೇಕಾಗಿದ್ದು, "ಎಚ್ಚರಿಕೆ" ದಂಡನೆಯು ಅಧಿನಿಯಮದ ವ್ಯಾಪ್ತಿಯಲ್ಲಿಲ್ಲದಿರುವುದರಿಂದ ಇದು ತಾಂತ್ರಿಕ ದೋಷಗಳಿಂದ ಕೂಡಿದ್ದು, ಶಿಸ್ತು ಪ್ರಾಧಿಕಾರದ ಆದೇಶವನ್ನು ಈ ಮಟ್ಟಿಗೆ ಮಾರ್ಪಡಿಸಬೇಕಾಗಿರುತ್ತದೆ. ಈ ಎಲ್ಲಾ ಅಂಶಗಳ ಹಿನ್ನಲೆಯಲ್ಲಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 119 ಪೊಸಿಅ 2012 ಬೆಂಗಳೂರು, ದಿನಾಂಕ: 12.12.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್. ಜಯಪ್ಪ, ಎಪಿಸಿ-173, ಡಿ.ಎ.ಆರ್., ದಾವಣಗೆರೆ ಇವರ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಮಾರ್ಪಡಿಸಿ ಕರ್ನಾಟಕ ಪೊಲೀಸ್ (ಶಿಸ್ತು ನಡವಳಿ) ನಿಯಮಗಳ 23(1)(a)(i)ರನ್ವಯ "ವಾಗ್ದಂಡನೆ" (censure) ವಿಧಿಸಿ ಮಾರ್ಪಡಿಸಿದೆ. ಉಳಿದಂತೆ ಅಮಾನತ್ತಿನ ಅವಧಿ ದಿನಾಂಕ 09.09.2011ರಿಂದ 25.01.2012ರವರೆಗೆ ಒಟ್ಟು 139 ದಿನಗಳನ್ನು ಅಮಾನತ್ತೆಂದು ಪರಿಗಣಿಸಿ, ದಿನಾಂಕ 28.08.2011ರಿಂದ 08.09.2011ರವರೆಗೆ ಒಟ್ಟು 12 ದಿನ ಗೈರು ಹಾಜರಿ ಅವಧಿ ದಿನಗಳನ್ನು ಕೆ.ಸಿ.ಎಸ್.ನಿಯಮ 106(ಎ) ಅನ್ವಯ "ವೇತನ ರಹಿತ ರಜೆ" ಎಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR-35**
**SC-30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಉಪೇಂದ್ರ, ಹೆಚ್‌ಸಿ-4750, ಉಪ್ಪಾರಪೇಟೆ ಪೊಲೀಸ್ ಠಾಣೆ, ಬೆಂಗಳೂರು ನಗರ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಕಮೀಷನರ್, ಪಶ್ಚಿಮ ವಿಭಾಗ, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ: ಡಿಇ/ಆರ್7/97/ಡಿಸಿಪಿ/ಪ/2011 ದಿನಾಂಕ 28.12.2011
2) ಮೇಲ್ಮನವಿ ಪ್ರಾಧಿಕಾರ ಹಾಗೂ ಹೆಚ್ಚುವರಿ ಪೊಲೀಸ್ ಕಮೀಷನರ್, (ಆಡಳಿತ), ಬೆಂಗಳೂರು ನಗರ ಇವರ ಆದೇಶ ಸಂಖ್ಯೆ: 13/ಅಪೀಲು-1/2012 ದಿನಾಂಕ 21.06.2012
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 29.11.2012
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)64/ 2012-13 ದಿನಾಂಕ 01.03.2013, 24.06.2013, 30.07.2013
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 136 ಸಿಎನ್‌ಎಸ್ 2013 ದಿನಾಂಕ: 02.12.2013

**ಪ್ರಸ್ತಾವನೆ:**

ಶ್ರೀ ಉಪೇಂದ್ರ, ಹೆಚ್‌ಸಿ-4750, ಉಪ್ಪಾರಪೇಟೆ ಪೊಲೀಸ್ ಠಾಣೆ, ಬೆಂಗಳೂರು ನಗರ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಅತೀವ ದುರ್ನಡತೆ, ಉದ್ಧಟತನ ಹಾಗೂ ಕರ್ತವ್ಯ ನಿರ್ಲಕ್ಷ್ಯತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:-**

"ಶ್ರೀ ಉಪೇಂದ್ರ ಹೆಚ್.ಸಿ. 4750, ಆದ ನೀವು ಉಪ್ಪಾರ ಪೇಟೆ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ನಿಮ್ಮನ್ನು ದಿನಾಂಕ: 20.09.2011 ರಂದು ಸಂಗಮ್ ಕ್ರಾಸ್ ಬಳಿ ಹಗಲು ಕರ್ತವ್ಯಕ್ಕೆ ನೇಮಕ ಮಾಡಿ ಫುಟ್‌ಪಾತ್ ವ್ಯಾಪಾರಿಗಳನ್ನು ಫುಟ್‌ಪಾತ್ ಮೇಲೆ ವ್ಯಾಪಾರ ಮಾಡಲು ಬಿಡದಂತೆ ತಿಳುವಳಿಕೆ ನೀಡಿದ್ದು, ಶ್ರೀ ಚನ್ನೇಗೌಡ, ಎ.ಎಸ್.ಐ., ಉಪ್ಪಾರ ಪೇಟೆ

ಪೊಲೀಸ್ ಠಾಣೆ ರವರು ಮಧ್ಯಾಹ್ನ 2–00 ಗಂಟೆಯಲ್ಲಿ ಸಂಗಮ್ ಕ್ರಾಸ್‌ನಲ್ಲಿ ಬೇಟಿ ನೀಡಿ ಪರಿಶೀಲಿಸಲಾಗಿ ನೀವು ಸ್ಥಳದಲ್ಲಿರದೆ ರಸ್ತೆಯಲ್ಲಿ ವ್ಯಾಪಾರಸ್ಥರನ್ನು ತೆರವುಗೊಳಿಸಿ ಸಾರ್ವಜನಿಕ ಸಂಚಾರಕ್ಕೆ ಅನುವು ಮಾಡಿಕೊಟ್ಟಿರುತ್ತಾರೆ. ನೀವು ಸ್ಥಳದಲ್ಲಿರದೆ ಪರೋಕ್ಷವಾಗಿ ವ್ಯಾಪಾರಿಗಳಿಗೆ ವ್ಯಾಪಾರ ಮಾಡಲು ಅನುಕೂಲ ಮಾಡಿಕೊಟ್ಟಿರುವುದು ಕಂಡು ಬಂದಿರುತ್ತದೆ. ನೀವು ನಿಮ್ಮ ಕರ್ತವ್ಯದಲ್ಲಿ ಅತೀವ ಬೇಜವಾಬ್ದಾರಿತನ, ದುರ್ನಡತೆ ಮತ್ತು ನಿರ್ಲಕ್ಷತೆಯನ್ನು ತೋರಿಸಿರುತ್ತೀರಿ"

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಕಮೀಷನರ್, ಪಶ್ಚಿಮ ವಿಭಾಗ, ಬೆಂಗಳೂರು ನಗರ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 28.12.2011ರ ಆದೇಶದಲ್ಲಿ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು 6 ತಿಂಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ ಮುಂದೂಡಿದ ದಂಡನೆಯನ್ನು ವಿಧಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಹೆಚ್ಚುವರಿ ಪೊಲೀಸ್ ಕಮೀಷನರ್, (ಆಡಳಿತ), ಬೆಂಗಳೂರು ನಗರ ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 21.06.2012ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಘಟನೆ ನಡೆದ ಸಂದರ್ಭದಲ್ಲಿ ಅರ್ಜಿದಾರರು ಊಟಕ್ಕೆ ತೆರಳಿದ್ದು ಈ ಅವಧಿಯಲ್ಲಿ ಮೇಲಾಧಿಕಾರಿಗಳು ಪರ್ಯಾಯ ವ್ಯವಸ್ಥೆ ಮಾಡಬೇಕಾಗಿದ್ದು ಇಂತಹ ವ್ಯವಸ್ಥೆಯನ್ನು ಮಾಡದೇ ಇರುವುದು ಅರ್ಜಿದಾರರ ಲೋಪವಾಗುವುದಿಲ್ಲವೆಂದು ತೀರ್ಮಾನಿಸಿ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಪರಿಗಣಿಸಿ ಇವರ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ ಶಿಸ್ತುಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಡಿಸಿ ಇವರಿಗೆ ವಾಗ್ದಂಡನೆ (censure) ವಿಧಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 146 ಪೊಸಿಅ 2012 ಬೆಂಗಳೂರು, ದಿನಾಂಕ: 12.12.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಉಪೇಂದ್ರ, ಹೆಚ್‌ಸಿ–4750, ಉಪ್ಪಾರಪೇಟೆ ಪೊಲೀಸ್ ಠಾಣೆ, ಬೆಂಗಳೂರು ನಗರ ಇವರ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆಗೆ ಬದಲಾಗಿ ಕರ್ನಾಟಕ ಪೊಲೀಸ್ (ಶಿಸ್ತು ನಡವಳಿ) ನಿಯಮಗಳ 23(1)(a)(i) ರನ್ವಯ **"ವಾಗ್ದಂಡನೆ"** (censure) ವಿಧಿಸಿ ಮಾರ್ಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR-33**
**SC-30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಜಿ.ಎನ್. ರಮಾನಾಥ್, ಡಿ.ವೈ.ಎಸ್.ಪಿ.(ನಿವೃತ್ತ) ಇವರ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ: ಸಿಬಿ(5)22/2007–08 ದಿನಾಂಕ 26.02.2011
2) ಅರ್ಜಿದಾರರ ಮೇಲ್ಮನವಿ ಅರ್ಜಿ ದಿನಾಂಕ: 27.01.2012
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(5)22/2007–08 ದಿನಾಂಕ 16.11.2012, 10.05.2013, 29.10.2013

**ಪ್ರಸ್ತಾವನೆ:**

ಶ್ರೀ ಜಿ.ಎನ್. ರಮಾನಾಥ್, ಡಿ.ವೈ.ಎಸ್.ಪಿ.(ನಿವೃತ್ತ) ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಹಿಂದೆ ಪೊಲೀಸ್ ಇನ್ಸ್‌ಪೆಕ್ಟರ್ ಆಗಿ ಕೆ.ಜಿ.ಎಫ್. ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿ, ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ ಹಾಗೂ ಕರ್ತವ್ಯಲೋಪವೆಸಗಿರುವ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಜಿ.ಎನ್. ರಮಾನಾಥ, ಪಿ.ಐ., ವಿಜಿಲೆನ್ಸ್, ಹೈಕೋರ್ಟ್, ಬೆಂಗಳೂರು ಆದ ನೀವು ಈ ಹಿಂದೆ ಪೊಲೀಸ್ ಇನ್ಸ್‌ಪೆಕ್ಟರ್ ಆಗಿ ಡಿ.ಸಿ.ಆರ್.ಬಿ., ಕೆ.ಜಿ.ಎಫ್. ಆಗಿ ಕರ್ತವ್ಯನಿರ್ವಹಿಸುತ್ತಿದ್ದಾಗ, ದಿನಾಂಕ 22.07.2006ರಿಂದ 05.08.2006ರವರೆಗೆ ಕರ್ತವ್ಯಕ್ಕೆ ಗೈರು ಹಾಜರಾಗಿರುತ್ತೀರಿ. ಅಲ್ಲದೆ ದಿನಾಂಕ 18.09.2006ರಂದು ಬಿಳಿ ಹಾಳೆಯಲ್ಲಿ ರಜೆ ಅರ್ಜಿ ಸಲ್ಲಿಸಿ ಹೋಗಿದ್ದು, ನೀವು ನೀಡಿದ್ದ ವಿಳಾಸ ತಪ್ಪೆಂದು ಜ್ಞಾಪನವನ್ನು ಸಿಬ್ಬಂದಿ/ಪೋಸ್ಟ್ ಮುಖಾಂತರ ನಿಮ್ಮನ್ನು ಸಂಪರ್ಕಿಸಲಾಗಿ, ಸಂಪರ್ಕ ದೊರಕಿರುವುದಿಲ್ಲ. ಈ ರೀತಿಯಾಗಿ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರುಹಾಜರಾಗುವ ಮತ್ತು ರಜೆಯನ್ನು ಮಂಜೂರು ಮಾಡಿಸಿಕೊಳ್ಳದೆ, ರಜೆಯ ಮೇಲೆ ಹೋಗುವ ಮೂಲಕ ನೀವು ಕೆ.ಸಿ.ಎಸ್.ಆರ್. ನಿಯಮ 106–ಎ ಮತ್ತು 107ಗಳನ್ನು ಉಲ್ಲಂಘನೆ ಮಾಡಿರುತ್ತೀರಿ ಮತ್ತು ಯಾವುದೇ ಪೂರ್ವಾನುಮತಿಯನ್ನು ಪಡೆಯದೆ, ಕೇಂದ್ರಸ್ಥಾನವನ್ನು ಬಿಡುವ ಮೂಲಕ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ, ಕರ್ತವ್ಯಲೋಪ ಎಸಗಿರುತ್ತೀರಿ."

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 26.02.2011ರ ಆದೇಶದಲ್ಲಿ ಅರ್ಜಿದಾರರಿಗೆ **"ಛೀಮಾರಿ"** ಶಿಕ್ಷೆ ವಿಧಿಸಿ, ಕರ್ತವ್ಯಕ್ಕೆ ಗೈರುಹಾಜರಾದ ಅವಧಿ ದಿನಾಂಕ 27.07.2006ರಿಂದ 05.08.2006ರವರೆಗೆ ಮತ್ತು ದಿನಾಂಕ 18.09.2006ರಿಂದ 28.01.2007ರವರೆಗೆ ಸಂಬಳ ರಹಿತ ರಜೆ ಎಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿ, ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ ಹಾಗೂ ಕರ್ತವ್ಯಲೋಪವೆಸಗಿರುವುದು ಸಾಬೀತಾಗಿರುತ್ತದೆ. ಶಿಸ್ತು ಪ್ರಾಧಿಕಾರವು ಆ.ಪೊ.ಅ.ರವರು ವಯೋನಿವೃತ್ತಿ ಹೊಂದುತ್ತಿರುವುದನ್ನು ಗಣನೆಗೆ ತೆಗೆದುಕೊಂಡು **"ಛೀಮಾರಿ"** ಶಿಕ್ಷೆಯನ್ನು ವಿಧಿಸಿ ಗೈರು ಹಾಜರಾದ ಅವಧಿಯನ್ನು ಇತ್ಯರ್ಥಗೊಳಿಸಿರುವ ಹಿನ್ನಲೆಯಲ್ಲಿ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 9 ಪೊಸಿಅ 2012 ಬೆಂಗಳೂರು, ದಿನಾಂಕ: 13.12.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ.ಎನ್. ರಮಾನಾಥ್, ಡಿ.ವೈ.ಎಸ್.ಪಿ.(ನಿವೃತ್ತ) ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

PR-38
SC-30

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಜಿ. ವೆಂಕಟಪ್ಪ, ಸಿಹೆಚ್‌ಸಿ–112, ತಿರುಮಣಿ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ, ಇವರ ಆದೇಶ ಸಂಖ್ಯೆ ಸಿಬ್ಬಂದಿ(4)/ಪನ್ನಿ/ಡಿಇ/9/2008–09 (ಒ.ಬಿ. ಸಂಖ್ಯೆ 352/2011) ದಿನಾಂಕ 17.09.2013
2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು (ಪ್ರಭಾರ), ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ ಅಪೀಲು/50/ಪನ್ನಿ/2011–12 (ಒ.ಬಿ. ಸಂಖ್ಯೆ 45/2012–13) ದಿನಾಂಕ 30.06.2012
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 04.02.2013
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)78/ 2012–13 ದಿನಾಂಕ: 18.07.2013 ಮತ್ತು 06.08.2013

**ಪ್ರಸ್ತಾವನೆ:**

ಶ್ರೀ ಜಿ. ವೆಂಕಟಪ್ಪ, ಸಿಹೆಚ್‌ಸಿ–112, ತಿರುಮಣಿ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

ದೋಷಾರೋಪಣೆ:–

"ದಿನಾಂಕ: 19.02.2008 ರಂದು ನಿಮ್ಮನ್ನು ತುಮಕೂರು ಹೊಸ ಬಡಾವಣೆ ಪೊಲೀಸ್ ಠಾಣೆಗೆ ಮೊ.ಸಂ. 26/2008 ಕಲಂ 506, 420, ಐಪಿಸಿ ಮತ್ತು 3, 4, ಮತ್ತು 5 The prize chits & money circulation schemes (Baning) Act 1978ಗೆ ಸಂಬಂಧಿಸಿದಂತೆ ಪ್ರಕರಣದ 1ನೇ ಆರೋಪಿಯಾದ ನಿಮ್ಮನ್ನು 2 ನೇ ಆರೋಪಿಯಾದ ನಿಮ್ಮ ಪತ್ನಿ ಶ್ರೀಮತಿ ರತ್ನಮ್ಮರವರನ್ನು ದಸ್ತಗಿರಿ ಮಾಡಿದ ಸಂದರ್ಭದಲ್ಲಿ ನಿಮ್ಮ ಪತ್ನಿ ನೀಡಿದ ವಿಷ ದ್ರಾವಣವನ್ನು ಸಾಕ್ಷಿಗಳಾದ ಕೆ.ಎಲ್.ಎನ್. ರಾಜು, ಮ.ಹೆಚ್.ಸಿ, ಸಿ. ಕಲ್ಪನಾ, ಸಾರ್ವಜನಿಕರಾದ ರುದ್ರೇಶ, ಪಂಚಾಕ್ಷರಿರವರ ಎದುರಿನಲ್ಲಿ ವಿಷ ಸೇವಿಸಿ ಆತ್ಮಹತ್ಯೆ ಮಾಡಿಕೊಳ್ಳಲು ಪ್ರಯತ್ನಿಸಿ ಮತ್ತು ನಿಮ್ಮ ಪತ್ನಿಯನ್ನು ವಿಷ ಸೇವಿಸಲು ಪ್ರಚೋದಿಸಿ ಆಕೆಗೆ ವಿಷವನ್ನು ಕುಡಿಯಲು ಕೊಟ್ಟು ಅವರು ವಿಷ ಸೇವಿಸುವಂತೆ ಮಾಡಿದ್ದು, ಈ ಬಗ್ಗೆ ತುಮಕೂರು ಹೊಸ ಬಡವಾಣೆ ಪೊಲೀಸ್ ಠಾಣೆಯಲ್ಲಿ ಮೊ.ಸಂ. 28/2008 ಕಲಂ 309, 306, ಐಪಿಸಿ ಅನ್ವಯ ಪ್ರಕರಣ ದಾಖಲಾಗಿದೆ. ಈ ರೀತಿ ನೀವು ದುರ್ನಡತೆ ತೋರಿರುತ್ತೀರಿ."

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ 17.09.2011ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗುವಂತೆ 2 (ಎರಡು) ವರ್ಷಗಳ ಕಾಲ ಮುಂದೂಡಿ, ದಿನಾಂಕ 19.02.2008ರಿಂದ 23.12.2008ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಲಾದ ದಂಡನೆಯನ್ನು ವಿಧಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು (ಪ್ರಭಾರ), ಕೇಂದ್ರ ವಲಯ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 30.06.2013ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಅತೀವ ದುರ್ನಡತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 19 ಪೊಸಿಅ 2013 ಬೆಂಗಳೂರು, ದಿನಾಂಕ: 30.10.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ. ವೆಂಕಟಪ್ಪ, ಸಿಹೆಚ್‌ಸಿ–112, ತಿರುಮಣಿ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR-1232**
**SC-30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಹೆಚ್.ಟಿ. ಜಯರಾಮಯ್ಯ, ಪಿ.ಐ. ಬೆಂಗಳೂರು ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ 228/ಡಿಇ–2/ಆರ್–7/ಸಿಓಪಿ/2009 ದಿನಾಂಕ 14.02.2013
2) ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ ಸಿಬಿ(8)83/2009–2010 (ಓ.ಬಿ. ಸಂಖ್ಯೆ: 149/2013) ದಿನಾಂಕ 10.05.2013
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 03.06.2013
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)83/2009–2010 ದಿನಾಂಕ 17.09.2013

**ಪ್ರಸ್ತಾವನೆ:**

ಶ್ರೀ ಹೆಚ್.ಟಿ. ಜಯರಾಮಯ್ಯ, ಪಿ.ಐ. ಬೆಂಗಳೂರು ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಹಿಂದೆ ನಂದಿನಿ ಲೇಔಟ್ ಪೊಲೀಸ್ ಠಾಣೆ, ಬೆಂಗಳೂರು ನಗರ ಇಲ್ಲಿ ಶ್ರೀಮತಿ ಅನುಸೂಯಮ್ಮ ಇವರಿಗೆ ಅನಾವಶ್ಯಕವಾಗಿ ಮಾನಸಿಕ ತೊಂದರೆ ಕೊಟ್ಟು ಕರ್ತವ್ಯಲೋಪವೆಸಗಿರುವ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ಶ್ರೀ ಹೆಚ್.ಟಿ. ಜಯರಾಮಯ್ಯ, ಪಿ.ಐ. ವಿ.ವಿ.ಐ.ಪಿ, ಭದ್ರತೆ ಆದ ನೀವು ಈ ಹಿಂದೆ ನಂದಿನ ಲೇಔಟ್ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಅರ್ಜಿದಾರರಾದ ಶ್ರೀಮತಿ ಅನುಸೂಯಮ್ಮ, ನಂದಿನಿ ಲೇಔಟ್, ಬೆಂಗಳೂರು ರವರು ತಮ್ಮ ತಾಯಿಯವರೊಂದಿಗೆ ವಾಸವಾಗಿದ್ದು, ಶ್ರೀಮತಿ ಇಂದುಮತಿ ಎಂಬುವವರು ಸದರಿ ಮನೆಯ ವಿದ್ಯುತ್‌ಚ್ಛಕ್ತಿ ಬಿಲ್ ಮತ್ತು ನೀರಿನ ಬಿಲ್‌ಗಳನ್ನು ತನ್ನ ಹೆಸರಿಗೆ ಅನಧಿಕೃತವಾಗಿ ಪಡೆದುಕೊಂಡು ನ್ಯಾಯಾಲಯದಲ್ಲಿ ಸಿವಿಲ್ ವ್ಯಾಜ್ಯ ಸಂಖ್ಯೆ: ಒ.ಎಸ್.ನಂ.8195/2006 ರಂತೆ ದಾವೆ ಹೂಡಿದ್ದು ಬಾಕಿಯಿರುತ್ತದೆ. ಈ ಮಧ್ಯೆ ಶ್ರೀಮತಿ ಇಂದುಮತಿ ರವರು ಶ್ರೀಮತಿ ಅನುಸೂಯಮ್ಮ ರವರ ವಿರುದ್ಧ ಸದರಿ ವಾಸದ ಮನೆಯನ್ನು ಖಾಲಿ ಮಾಡಿಸಬೇಕೆಂದು ದಿನಾಂಕ: 06.07.2007 ರಂದು ಠಾಣೆಗೆ ದೂರು ನೀಡಿರುತ್ತಾರೆ. ಸದರಿ ದೂರಿನ್ವಯ ಅಂದಿನ ಠಾಣಾಧಿಕಾರಿಯಾಗಿದ್ದ ನೀವು ತಮ್ಮ ಸಿಬ್ಬಂದಿಯನ್ನು ಶ್ರೀಮತಿ ಅನುಸೂಯಮ್ಮ ರವರ ಬಳಿ ಕಳುಹಿಸಿ ಮನೆ ಖಾಲಿ ಮಾಡುವಂತೆ ಒತ್ತಡ ತಂದಿದ್ದು ಮತ್ತು ಅನಾವಶ್ಯಕವಾಗಿ ಮಾನಸಿಕವಾಗಿ ತೊಂದರೆಕೊಟ್ಟು ಕರ್ತವ್ಯಲೋಪವೆಸಗಿರುತ್ತೀರಿ."

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 14.02.2013ರ ಆದೇಶದಲ್ಲಿ ಅರ್ಜಿದಾರರ ಒಂದು ವರ್ಷದ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರದಂತೆ (ಧಕ್ಕೆಯಾಗದಂತೆ) ಒಂದು ವರ್ಷ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಮೇಲ್ಮನವಿಯನ್ನು ಪರಿಶೀಲಿಸಿ, ಆಪೊಅ ರವರ ಸ್ಥಗಿತ ವೇತನ ಬಡ್ತಿಗಳನ್ನು ಶಿಕ್ಷೆಯಾಗಿ ಮುಂದೂಡಲು ನಿಯಮಗಳಲ್ಲಿ ಅವಕಾಶವಿರದ ಕಾರಣ ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 10.05.2013ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ಆದೇಶವನ್ನು ಮಾರ್ಪಡಿಸಿ "ಛೀಮಾರಿ" ಶಿಕ್ಷೆ ವಿಧಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯಲೋಪವೆಸಗಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಮೇಲ್ಮನವಿ ಪ್ರಾಧಿಕಾರವು ಮಾರ್ಪಡಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 75 ಪೊಸಿಅ 2013 ಬೆಂಗಳೂರು, ದಿನಾಂಕ: 29.11.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್.ಟಿ. ಜಯರಾಮಯ್ಯ, ಪಿ.ಐ. ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR-31**
**SC-30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಆರ್.ಎನ್.ನಾಯಕ, ಪಿ.ಐ. ಧಾರವಾಡ ಉಪನಗರ ಪೊಲೀಸ್ ಠಾಣೆ, ಧಾರವಾಡ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಹುಬ್ಬಳ್ಳಿ–ಧಾರವಾಡ ನಗರ ಇವರ ಆದೇಶ ಸಂಖ್ಯೆ ಸಿಪಿ/ಸಿಬ್ಬಂದಿ–3/ನಿಯಮ–7/87/2012 (ಆದೇಶ ಪುಸ್ತಕ ಸಂಖ್ಯೆ: 1261/2012) ದಿನಾಂಕ 02.01.2013
2) ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ ಸಿಬಿ(8)94/2012–2013 (ಓ.ಬಿ. ಸಂಖ್ಯೆ: 118/2013) ದಿನಾಂಕ 19.04.2013
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 05.07.2013
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)94/ 2012–2013 ದಿನಾಂಕ 24.09.2013

**ಪ್ರಸ್ತಾವನೆ:**

ಶ್ರೀ ಆರ್.ಎನ್.ನಾಯಕ, ಪಿ.ಐ. ಧಾರವಾಡ ಉಪನಗರ ಪೊಲೀಸ್ ಠಾಣೆ, ಧಾರವಾಡ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"1. ಠಾಣೆಯ ದಿನಚರಿಗಳನ್ನು ಪ್ರತಿನಿತ್ಯ ಮೇಲಾಧಿಕಾರಿಗಳಿಗೆ ಕಳುಹಿಸದೇ ದಿನಾಂಕ: 20.07.2012 ರಿಂದ 08.10.2012 ರ ವರೆಗೆ 03 ತಿಂಗಳ ಕಾಲ ಬರೆದ ದಿನಚರಿಗಳನ್ನು ಒಂದೇ ಕಟ್ಟಿನಲ್ಲಿ ದಿನಾಂಕ: 03.12.2012 ರಂದು ಎಸಿಪಿ, ಧಾರವಾಡ ರವರಿಗೆ ಕಳುಹಿಸಿ ನಿಮ್ಮ ಕರ್ತವ್ಯದಲ್ಲಿ ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿ ತೋರಿಸಿರುತ್ತೀರಿ.

2. ದಿನಾಂಕ: 08.10.2012 ರಿಂದ ಇಲ್ಲಿಯವರೆಗೂ (ಅಂದರೆ ಮಾಹೆ ಡಿಸೆಂಬರ್) ಠಾಣೆಯಲ್ಲಿ ಬರೆದ ದಿನಚರಿಯನ್ನು ಸಲ್ಲಿಸದೇ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ತೋರ್ಪಡಿಸಿರುತ್ತೀರಿ."

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಹುಬ್ಬಳ್ಳಿ–ಧಾರವಾಡ ನಗರ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 02.01.2013ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರದಂತೆ "ಮೂರು (3)" ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 19.04.2013ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 85 ಪೊಸಿಅ 2013 ಬೆಂಗಳೂರು, ದಿನಾಂಕ: 29.11.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಆರ್.ಎನ್.ನಾಯಕ, ಪಿ.ಐ. ಧಾರವಾಡ ಉಪನಗರ ಪೊಲೀಸ್ ಠಾಣೆ, ಧಾರವಾಡ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR-29**
**SC-30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಹೆಚ್. ಶಫೀವುಲ್ಲಾ, ಪಿ.ಎಸ್.ಐ., ತುಂಗಾನಗರ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ಆದೇಶ ಸಂಖ್ಯೆ: ಸಿಬ್ಬಂದಿ(4)/ಶಿಕ್ಷೆ/76/2012 (ಓ.ಬಿ. ಸಂಖ್ಯೆ: 57/2013) ದಿನಾಂಕ 22.01.2013

2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರ ಆದೇಶ ಸಂಖ್ಯೆ 22/ಅಪೀಲು/ಸಿಬ್ಬಂದಿ–2/2012–13 (ಓ.ಬಿ. ಸಂಖ್ಯೆ: 20/2013–14) ದಿನಾಂಕ 06.05.2013

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 07.08.2013

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)41/2013–14 ದಿನಾಂಕ 01.10.2013

**ಪ್ರಸ್ತಾವನೆ:**

ಶ್ರೀ ಹೆಚ್. ಶಫೀವುಲ್ಲಾ, ಪಿ.ಎಸ್.ಐ., ತುಂಗಾನಗರ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇಲ್ಲಿ ಕರ್ತವ್ಯ ನಿರ್ವಹಿಸುತ್ತಿರುವಾಗ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತನ ಮತ್ತು ಅಶಿಸ್ತು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

ಸಿಪಿಐ, ಶಿವಮೊಗ್ಗ ಗ್ರಾಮಾಂತರ ವೃತ್ತ ಇವರು ದಿನಾಂಕ: 18.17.11, 05.09.11, 15.09.11, 30.09.11, 06.11.11, 22.11.11, 18.12.11, 12.12.11, 24.04.12, 14.06.12, 19.07.12, 30.09.12, 09.10.12ರಂದು ಶಿವಮೊಗ್ಗ ತುಂಗಾನಗರ ಪೊಲೀಸ್ ಠಾಣೆಗೆ ಬೇಟಿ ನೀಡಿ ಸಿಪಿಐ ರವರ ಸಂದರ್ಶನ ಪುಸ್ತಕದಲ್ಲಿ ಕಳವು ಪ್ರಕರಣಗಳಲ್ಲಿ ಆರೋಪಿಗಳನ್ನು ಪತ್ತೆ ಮಾಡುವ ಬಗ್ಗೆ ಮತ್ತು ಇತರೆ ವಿಷಯಗಳ ಬಗ್ಗೆ ಸೂಕ್ತ ಮಾರ್ಗದರ್ಶನ ಮತ್ತು ಸೂಚನೆಗಳನ್ನು ನೀಡಿರುತ್ತಾರೆ. ನೀವು ಮೇಲ್ಕಂಡ ಯಾವುದೇ ಸೂಚನೆಗಳನ್ನು ಪಾಲನೆ ಮಾಡಿದ ಬಗ್ಗೆ ಪಾಲನಾ ವರದಿಯನ್ನು ಸಿಪಿಐ ರವರಿಗೆ ನಿವೇದಿಸಿಕೊಂಡಿರುವುದಿಲ್ಲವೆಂದು ತನ್ಮೂಲಕ ನೀವು ತೀವ್ರ ಕರ್ತವ್ಯ ನಿರ್ಲಕ್ಷ್ಯತನ ಮತ್ತು ಅಶಿಸ್ತನ್ನು ಪ್ರದರ್ಶಿಸಿರುತ್ತೀರೆಂದು ಉಲ್ಲೇಖಿತ ವರದಿಯಿಂದ ತಿಳಿದುಬಂದ ಮೇರೆಗೆ ಮೇಲ್ಕಂಡಂತೆ ಆರೋಪ ಹೊರಿಸಲಾಗಿದೆ."

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 22.01.2013ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು 06 (ಆರು) ತಿಂಗಳ ಕಾಲ ಮುಂದಿನ ಪರಿಣಾಮವಿಲ್ಲದಂತೆ ಮುಂದೂಡುವ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 06.05.2013ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತನ ಮತ್ತು ಅಶಿಸ್ತು ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 116 ಪೊಸಿಅ 2013 ಬೆಂಗಳೂರು, ದಿನಾಂಕ: 12.12.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಹೆಚ್. ಶಫೀವುಲ್ಲಾ, ಪಿ.ಎಸ್.ಐ., ತುಂಗಾನಗರ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR-37**
**SC-30**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಸಿ.ಎನ್. ರಮೇಶ್, ಪಿ.ಎಸ್.ಐ., ವಿ.ವಿ.ಐ.ಪಿ. ಭದ್ರತೆ, ಪೊಲೀಸ್ ಕಮೀಷನರ್‌ರವರ ಕಛೇರಿ, ಬೆಂಗಳೂರು ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಕಮೀಷನರ್, ಮೈಸೂರು ನಗರ, ಇವರ ಆದೇಶ ಸಂಖ್ಯೆ ಇ.ವಿ.10/1997–98 (ಒ.ಬಿ. ಸಂಖ್ಯೆ: 2294/2001 ದಿನಾಂಕ 02.01.2002) ದಿನಾಂಕ 05.12.2001

2) ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ ಅಪೀಲು(2) 51/2001–02 ದಿನಾಂಕ 06.02.2003

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 15.10.2009

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)59/ 2009–10 ದಿನಾಂಕ 04.07.2012, 15.01.2013, 14.05.2013, 08.10.2013

**ಪ್ರಸ್ತಾವನೆ:**

ಶ್ರೀ ಸಿ.ಎನ್. ರಮೇಶ್, ಪಿ.ಎಸ್.ಐ., ವಿ.ವಿ.ಐ.ಪಿ. ಭದ್ರತೆ, ಪೊಲೀಸ್ ಕಮೀಷನರ್‌ರವರ ಕಛೇರಿ, ಬೆಂಗಳೂರು ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಹಿಂದೆ ದೇವರಾಜ ಪೊಲೀಸ್ ಠಾಣೆ, ಮೈಸೂರು ನಗರ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ತೀವ್ರ ರೀತಿಯ ದುರ್ನಡತೆ ಹಾಗೂ ಅಶಿಸ್ತು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ದಿನಾಂಕ: 26.07.1997 ರಂದು ಮಧ್ಯಾಹ್ನ 3 ಗಂಟೆಯಲ್ಲಿ ದೇವರಾಜ ಪೊಲೀಸ್ ಠಾಣೆಯ ಸರಹದ್ದಿನಲ್ಲಿರುವ ಗುರುಕೃಪ ಲಾಡ್ಜ್‌ನಲ್ಲಿ ತಂಗಿದ್ದ ಕೊಡಗಿನ ಯುವತಿ ಕುಮಾರಿ ಎಂ. ವಿ. ಅನಿತ ಹಾಗೂ ರಮೇಶ್ ಎಂಬುವವರನ್ನು ದೇವರಾಜ ಠಾಣೆ ಪೊಲೀಸರು ಠಾಣೆಗೆ ತಂದಿದ್ದು, ಠಾಣೆಯ ನಿರೀಕ್ಷಕರು ವಿಶ್ರಾಂತಿಗೆ ಹೋದ ನಂತರ ನೀವು ರಾತ್ರಿ ಸುಮಾರು 11 ಗಂಟೆಯಲ್ಲಿ ಸದರಿ ಯುವತಿ ಅನಿಲಳನ್ನು ಸಂಭೋಗಿಸಬೇಕೆಂಬ ದುರುದ್ದೇಶದಿಂದ ಠಾಣೆಯಲ್ಲಿ ಯಾವ ಅನುಮತಿಯನ್ನು ಪಡೆಯದೆ ಅನಿಲ್‌ಳನ್ನು ಕರೆದುಕೊಂಡು ಬರುವಂತೆ ಮಹಿಳಾ ಪೇದೆ ಭಾವನಾ ರಾಣಿಗೆ ಬೆದರಿಕೆ ಹಾಕಿ, ಲೂಜಿಯಾ ಹೋಟೆಲ್ ಬಳಿ ಬರಹೇಳಿ ಅಲ್ಲಿಗೆ ಬಂದವರನ್ನು ಒಂದು ಬಿಳಿ ಮಾರುತಿ ಕಾರಿನಲ್ಲಿ ನಿಮ್ಮ ಮನೆಗೆ ಕರೆದುಕೊಂಡು ಹೋಗಿ ಅನಿಲ್‌ಳನ್ನು ನಿಮ್ಮ ಜೊತೆಯಲ್ಲೆ ಮಲಗುವಂತೆ ಬಲವಂತಮಾಡಿದ್ದು, ನಂತರ ರಾತ್ರಿ 12.30 ಗಂಟೆಯಲ್ಲಿ ಕಾರಿನಲ್ಲೆ ಮಡಿಕೇರಿಯ ಕಡೆಗೆ ಕರೆದುಕೊಂಡು ಹೋಗಿ ದಾರಿಯಲ್ಲಿ ಬೆಳಗಿನ ಜಾವ ಸುಮಾರು 5 ಗಂಟೆಯಲ್ಲಿ ಮೂತ್ರ ವಿಸರ್ಜನೆ ಮಾಡುತ್ತಿದ್ದ ಅನಿಲ್‌ಳನ್ನು ಬಲಾತ್ಕಾರವಾಗಿ ಹಟ ಸಂಭೋಗ ಮಾಡಿದ್ದು ನಂತರ ಆಕೆಯ ಊರಿಗೆ ಕರೆದುಕೊಂಡು ಹೋಗಿ ಪುನ: ವಿಚಾರಣೆ ಮಾಡಬೇಕೆಂದು ಅವಳನ್ನು ವಾಪಸ್ಸು ಮೈಸೂರಿಗೆ ಕರೆದುಕೊಂಡು ಬಂದು ದಾರಿಯಲ್ಲೆ ಮಹಿಳಾ ಪೇದೆಯನ್ನು ಇಳಿಸಿ ನಿಮ್ಮ ಮನೆಗೆ ಕರೆದುಕೊಂಡು ಹೋಗಿ ಮನೆಯಲ್ಲಿ ಅನಿಲ್‌ಳನ್ನು ಬಲವಂತವಾಗಿ ಸ್ನಾನಮಾಡುವಂತೆ ಒತ್ತಾಯಮಾಡಿ ಆಕೆ ಸ್ನಾನ ಮಾಡುತ್ತಿದ್ದಾಗ ಮತ್ತೆ ಬಲಾತ್ಕಾರವಾಗಿ ಆಕೆಯೊಂದಿಗೆ ಹಟ ಸಂಭೋಗ ಮಾಡಿ ನಂತರ ಸದರಿ ವಿಚಾರವನ್ನು ಯಾರಿಗೂ ಹೇಳಬೇಡವೆಂದು ಬೆದರಿಕೆ ಹಾಕಿದ್ದು, ಪೊಲೀಸ್ ವಶದಲ್ಲಿದ್ದ ಕುಮಾರಿ ಅನಿಲಳ ಮೇಲೆ ಅತ್ಯಾಚಾರವನ್ನೆಸಗಿದ್ದು, ಈ ಬಗ್ಗೆ ನಿಮ್ಮ ವಿರುದ್ದ ಮಹಿಳಾ ಠಾಣೆಯಲ್ಲೆ ಮೊ. ಸಂ: 171:97 ಕಲಂ 342. 354.376 (2)(ಎ)(3) 506,201. ಐಪಿಸಿ ರೀತ್ಯಾ ಕೇಸು ದಾಖಲಾಗುವಂತೆ ಕೃತ್ಯವೆಸಗಿದ್ದು ತನ್ಮೂಲಕ ಕರ್ತವ್ಯದಲ್ಲಿ ತೀವ್ರ ರೀತಿಯ ದುರ್ನಡತೆ, ಹಾಗೂ ಅಶಿಸ್ತು, ಪ್ರದರ್ಶಿಸಿರುತ್ತೀರಿ"

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಕಮೀಷನರ್, ಮೈಸೂರು ನಗರ, ಮೈಸೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ 05.12.2001ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆಯಾಗುವಂತೆ ಮೂರು ವರ್ಷಗಳ ಕಾಲ ಮುಂದೂಡಲಾದ ದಂಡನೆಯನ್ನು ವಿಧಿಸಲಾಗಿದೆ. ದಿನಾಂಕ 05.08.1997ರಿಂದ 30.04.1999ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿ, ಆ ಅವಧಿಯ ವೇತನ ಭತ್ಯೆ ಇತ್ಯಾದಿಗಳನ್ನು ಅಮಾನತ್ತಿನ ಅವಧಿಯಲ್ಲಿ ನೀಡುವ ಜೀವನಾಂಶ ಭತ್ಯೆಗೆ ಸೀಮಿತಗೊಳಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 06.02.2003ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ತೀವ್ರ ರೀತಿಯ ದುರ್ನಡತೆ ಹಾಗೂ ಅಶಿಸ್ತು ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 192 ಪೊಸಿಇ 2009 ಬೆಂಗಳೂರು, ದಿನಾಂಕ: 23.11.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿ.ಎನ್. ರಮೇಶ್, ಪಿ.ಎಸ್.ಐ., ವಿ.ವಿ.ಐ.ಪಿ. ಭದ್ರತೆ, ಪೊಲೀಸ್ ಕಮೀಷನರ್‌ರವರ ಕಛೇರಿ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR-30**

**SC-30**

## ತೋಟಗಾರಿಕೆ ಸಚಿವಾಲಯ

**ವಿಷಯ:** ರೇಷ್ಮೆ ಇಲಾಖೆಯಲ್ಲಿರುವ ಸಿಬ್ಬಂದಿಯವರನ್ನು ಕೃಷಿ ಇಲಾಖೆಯಲ್ಲಿ ಪ್ರತಿನಿಯೋಜನೆ ಮೇಲೆ ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕೃಷಿ ಇಲಾಖೆ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಕೃಇ/ಪ್ರಕಾ/83/2013, ದಿನಾಂಕ: 20-09-2013.
2. ಸರ್ಕಾರದ ಪತ್ರ ಸಂಖ್ಯೆ: ತೋಇ 130 ರೇಇವಿ 2013, ದಿನಾಂಕ: 27-09-2013.
3. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ರೇಷ್ಮೆ ಇಲಾಖೆ ಇವರ ಪತ್ರಸಂಖ್ಯೆ:ಸಿಬ್ಬಂದಿ1(8):ರೇಪ್ರದ: ಉಕ:ಪ್ರನಿ:42:2013-14, ದಿನಾಂಕ:17/26-10-2013.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 20-09-2013 ರ ಪತ್ರದಲ್ಲಿ ಕೃಷಿ ಇಲಾಖೆಯ ವತಿಯಿಂದ ಹಲವಾರು ರೈತ ಪರ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದ್ದು, ತಾಂತ್ರಿಕ ಸಿಬ್ಬಂದಿ ವರ್ಗದವರ ಕೊರತೆಯಿಂದಾಗಿ ಇಲಾಖೆಯ ಕಾರ್ಯಕ್ರಮಗಳನ್ನು ಹೆಚ್ಚು ಸಮರ್ಪಕ ಮತ್ತು ಪರಿಣಾಮಕಾರಿಯಾಗಿ ಅನುಷ್ಠಾನ ಮಾಡುವಲ್ಲಿ ತೊಂದರೆಗಳಾಗುತ್ತಿದ್ದು, ಇಲಾಖೆಯಲ್ಲಿ ತಾಂತ್ರಿಕ ಹುದ್ದೆಗಳು ಖಾಲಿ ಇರುತ್ತದೆ. ಈ ಬಗ್ಗೆ ದಿನಾಂಕ:16-09-2013ರಂದು ಮಾನ್ಯ ಕೃಷಿ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ತೋಟಗಾರಿಕೆ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳು, ರೇಷ್ಮೆ ಇಲಾಖೆಯಲ್ಲಿ 400 ಸಿಬ್ಬಂದಿಯವರು ಲಭ್ಯವಿದ್ದು, ಕೃಷಿ ಇಲಾಖೆಗೆ ಪ್ರತಿನಿಯೋಜನೆ ಮೇಲೆ ಪಡೆಯಲು ತಮ್ಮ ಸಹಮತಿ ಇರುತ್ತದೆ ಎಂದು ತಿಳಿಸಿರುವುದರಿಂದ ಈ ಬಗ್ಗೆ ಅಗತ್ಯ ಕ್ರಮ ಕೈಗೊಳ್ಳಬೇಕೆಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕೃಷಿ ಇಲಾಖೆ ಇವರು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (2)ರ ದಿನಾಂಕ: 27-09-2013 ರ ಪತ್ರದಲ್ಲಿ ಪ್ರತಿ ನಿಯೋಜನೆ ಬಗ್ಗೆ ಅಭಿಪ್ರಾಯದೊಂದಿಗೆ ವರದಿಯನ್ನು ನೀಡುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರನ್ನು ಕೋರಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (3)ರ ದಿನಾಂಕ: 17/26-10-2013 ರ ಪತ್ರದಲ್ಲಿ ಸರ್ಕಾರದ ಆದೇಶ ಸಂಖ್ಯೆ: ವಾಕೈ 1 ರೇಸೇವಿ 2007, ದಿನಾಂಕ:20-08-2010 ರನ್ವಯ 322 ರೇಷ್ಮೆ ಪ್ರದರ್ಶಕರ ಹುದ್ದೆಗಳನ್ನು ರೇಷ್ಮೆ ನಿರೀಕ್ಷಕರ ಹುದ್ದೆಗೆ ಉನ್ನತೀಕರಣ ಮಾಡಿ ಹಾಗೂ 144 ರೇಷ್ಮೆ ನಿರೀಕ್ಷಕರ ನೇರ ನೇಮಕಾತಿಯ ಖಾಲಿ ಹುದ್ದೆಗಳಿಗೆ ಬಡ್ತಿ ನೀಡಲು ಅನುಮತಿಸಿ ಈ ಎಲ್ಲಾ 466 (322+144) ರೇಷ್ಮೆ ನಿರೀಕ್ಷಕರನ್ನು ಇತರೆ ಇಲಾಖೆಗಳಿಗೆ ನಿಯೋಜಿಸುವ ಷರತ್ತಿಗೊಳಪಡಿಸಿ, ಬಡ್ತಿ ನೀಡಲಾಗಿದ್ದು, ಮುಂಬಡ್ತಿ ಹೊಂದಿರುವ ನೌಕರರನ್ನು ಇತರೆ ಇಲಾಖೆಗಳಿಗೆ ತತ್ಸಮಾನ ಹುದ್ದೆಯ ವೇತನ ಶ್ರೇಣಿಯಲ್ಲಿ (7275-13350) ಶ್ರೇಣಿಯಲ್ಲಿ ಖಾಲಿ ಇರುವ ಹುದ್ದೆಗಳ ವಿವರ ಕೋರಲಾಗಿದ್ದು, ಯಾವುದೇ ಇಲಾಖೆಯು ನಿಖರವಾಗಿ ಖಾಲಿ ಹುದ್ದೆಗಳ ವಿವರ ನೀಡಿರುವುದಿಲ್ಲವೆಂದು ತಿಳಿಸುತ್ತಾ, ಕೆಲವು ಇಲಾಖೆಗಳಲ್ಲಿ 113 ಮಂದಿ ರೇಷ್ಮೆ ನಿರೀಕ್ಷಕರು ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿದ್ದಾರೆ ಮತ್ತು ಹಲವಾರು ರೇಷ್ಮೆ ನಿರೀಕ್ಷಕರು ಹಿಂದಿನ ಹುದ್ದೆಯಲ್ಲಿಯೇ ಕಾಲಮಿತಿ ವೇತನಬಡ್ತಿ ಹಾಗೂ ಸ್ವಯಂ ಚಾಲಿತ ವಿಶೇಷ ವೇತನ ಬಡ್ತಿಯನ್ನು ಪಡೆದಿರುತ್ತಾರೆಂದು ರೇಷ್ಮೆ ಆಯುಕ್ತರು ತಿಳಿಸಿರುತ್ತಾರೆ. ಮುಂದುವರೆದು, ಕೃಷಿ ಇಲಾಖೆಯಲ್ಲಿ ರೇಷ್ಮೆ ನಿರೀಕ್ಷಕರ ಹುದ್ದೆಯ ತತ್ಸಮಾನ ವೇತನ ಶ್ರೇಣಿ 14550-26700 ಲಭ್ಯವಿರುವುದಿಲ್ಲ. ಈ ಮೇರೆಗೆ ರೇಷ್ಮೆ ನಿರೀಕ್ಷಕರು ಅವರು ಹೊಂದಿರುವ ಹುದ್ದೆಯ ವೇತನ ಶ್ರೇಣಿಯಲ್ಲಿಯೇ ಕೃಷಿ ಇಲಾಖೆಯಲ್ಲಿ ಸಹಾಯಕ ಕೃಷಿ ಅಧಿಕಾರಿ ಹುದ್ದೆಗೆ ಪ್ರತಿ ನಿಯೋಜನೆ ಮೇರೆಗೆ ರೈತ ಸಂಪರ್ಕ ಕೇಂದ್ರಗಳಲ್ಲಿ ಕಾರ್ಯನಿರ್ವಹಿಸಲು ನಿಯೋಜನೆ ಮಾಡುವ ಬಗ್ಗೆ ಸರ್ಕಾರದ ಹಂತದಲ್ಲಿ ಸೂಕ್ತ ಕ್ರಮ ಕೈಗೊಳ್ಳುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ರೇಷ್ಮೆ ಇಲಾಖೆಯಲ್ಲಿ ಅಧಿಕವಾಗಿರುವ 320 ರೇಷ್ಮೆ ನಿರೀಕ್ಷಕರುಗಳನ್ನು ಅವರು ಹೊಂದಿರುವ ಹುದ್ದೆಯ ವೇತನ ಶ್ರೇಣಿ ಮೇಲೆ ಕೃಷಿ ಇಲಾಖೆಯಲ್ಲಿನ ಸಹಾಯಕ ಕೃಷಿ ಅಧಿಕಾರಿ ಹುದ್ದೆಗಳಿಗೆ ಎರಡು ವರ್ಷಗಳ ಅವಧಿಗೆ ಪ್ರತಿನಿಯೋಜಿಸಲು ಸರ್ಕಾರವು ನಿರ್ಧರಿಸಿರುವ ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂ: ತೋಇ 130 ರೇಇವಿ 2013, ಬೆಂಗಳೂರು, ದಿನಾಂಕ: 20-12-2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣ ಹಿನ್ನಲೆಯಲ್ಲಿ ರೇಷ್ಮೆ ಇಲಾಖೆಯಲ್ಲಿ ಅಧಿಕವಾಗಿರುವ 320 ರೇಷ್ಮೆ ನಿರೀಕ್ಷಕರುಗಳನ್ನು ಅವರು ಹೊಂದಿರುವ ಹುದ್ದೆಯ ವೇತನ ಶ್ರೇಣಿ ಮೇಲೆ ಕೃಷಿ ಇಲಾಖೆಯಲ್ಲಿನ ಸಹಾಯಕ ಕೃಷಿ ಅಧಿಕಾರಿ ಹುದ್ದೆಗಳಿಗೆ ಎರಡು ವರ್ಷಗಳ ಅವಧಿಗೆ ಪ್ರತಿನಿಯೋಜಿಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಬಿ. ವಿಜಯಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ತೋಟಗಾರಿಕೆ ಇಲಾಖೆ (ರೇಷ್ಮೆ)

PR-23

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ:** ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾಕ್ಕೆ 2013-14ನೇ ಸಾಲಿನ ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಯೋಇ 70 ಎಸ್‌ಎಸ್‌ಎಂ 2013, ದಿನಾಂಕ:01.04.2013.
2. ಸರ್ಕಾರಿ ಆದೇಶ ಸಂಖ್ಯೆ:ಯೋಇ 20 ಹೈಕಮಂ 2013, ದಿನಾಂಕ:11.06.2013.
3. ಕಾರ್ಯದರ್ಶಿ, ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಇವರ ಪತ್ರ ಸಂಖ್ಯೆ ಹೈಕಪ್ರಮಂ/ಹನಿ/ಎಸಿ-1/2013-14, ದಿನಾಂಕ: 22.10.2013.
4. ಸರ್ಕಾರಿ ಆದೇಶ ಸಂಖ್ಯೆ:ಯೋಇ 20 ಹೈಕಮಂ 2013, ದಿನಾಂಕ:31.10.2013.

**ಪ್ರಸ್ತಾವನೆ:**

ಓದಲಾದ (1) ರ ಆದೇಶದಲ್ಲಿ ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾ, ಇವರಿಗೆ ರೂ.6800.00 ಲಕ್ಷಗಳ ಅನುದಾನವನ್ನು 2013–14ನೇ ಸಾಲಿಗೆ ನಿಗದಿ ಪಡಿಸಿ ಆದೇಶಿಸಲಾಗಿತ್ತು. ಪ್ರಸ್ತುತ ಸದರಿ ಅನುದಾನವನ್ನು 2013–14ನೇ ಸಾಲಿನ ಆಯವ್ಯಯದಲ್ಲಿ ಪರಿಷ್ಕರಿಸಿ, ಆರ್ಥಿಕ ಇಲಾಖೆಯು ರೂ.6530.00 ಲಕ್ಷಗಳಿಗೆ ನಿಗದಿ ಪಡಿಸಿರುತ್ತದೆ. ಅದರ ವಿವರಗಳು ಈ ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 1. | 2515–00–103–0–01–101 (ಸಹಾಯಾನುದಾನ) | 130.00 |
| 2. | 2515–00–103–0–01–132 (ಬಂಡವಾಳ ವೆಚ್ಚ) | 3655.00 |
| 3. | 2515–00–103–0–01–422 (ವಿಶೇಷ ಘಟಕ ಯೋಜನೆ) | 2008.00 |
| 4. | 2515–00–103–0–01–423 (ಗಿರಿಜನ ಉಪಯೋಜನೆ) | 737.00 |
| | ಒಟ್ಟು | **6530.00** |

ಓದಲಾದ (2) ಆದೇಶದಲ್ಲಿ ಮೊದಲನೇ ಕಂತಿನ ಮೊತ್ತವಾಗಿ ರೂ.1700.00 ಲಕ್ಷಗಳನ್ನು ಬಿಡುಗಡೆಗೊಳಿಸಲಾಗಿದ್ದು, ಪ್ರಸ್ತುತ ಓದಲಾದ (3)ರ ಪತ್ರದಲ್ಲಿ ಕಾರ್ಯದರ್ಶಿ, ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಇವರು ಎರಡನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿದ್ದು, ಸರ್ಕಾರವು ಓದಲಾದ (4)ರ ಆದೇಶದಲ್ಲಿ ಲೆಕ್ಕಶೀರ್ಷಿಕೆ 2515–00–103–0–01–10(ಸಹಾಯಾನುದಾನ)ರಡಿ 2ನೇ ಕಂತಿನ ಮೊತ್ತವಾಗಿ ರೂ.32.50 ಲಕ್ಷಗಳನ್ನು ಬಿಡುಗಡೆಗೊಳಿಸಿ ಆದೇಶಿಸಿದೆ ಉಳಿದಂತೆ ಮೂರು ಲೆಕ್ಕಶೀರ್ಷಿಕೆಗಳಡಿ 2ನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಯೋಇ 20 ಹೈಕಮಂ 2013, ಬೆಂಗಳೂರು, ದಿನಾಂಕ:12.11.2013**

ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾಕ್ಕೆ 2013–14ನೇ ಸಾಲಿನ ಎರಡನೇ ಕಂತಿನ ಅನುದಾನವಾಗಿ ರೂ.1532.50 ಲಕ್ಷ (ಹದಿನೈದು ಕೋಟಿ ಮೂವತ್ತೆರಡು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಗಳಡಿ ಬಿಡುಗಡೆ ಮಾಡಿದೆ.

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ–– | ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 1. | 2515–00–103–0–01–132 (ಬಂಡವಾಳ ವೆಚ್ಚ) | 957.00 |
| 2. | 2515–00–103–0–01–422 (ವಿಶೇಷ ಘಟಕ ಯೋಜನೆ) | 422.00 |
| 3. | 2515–00–103–0–01–423 (ಗಿರಿಜನ ಉಪಯೋಜನೆ) | 153.50 |
| | ಒಟ್ಟು | **1532.50** |

ಬಿಡುಗಡೆಯಾದ ಈ ಅನುದಾನವನ್ನು ಉಪಯೋಗಿಸಿಕೊಂಡು ನಿಯಮಾನುಸಾರ ಹಣ ಬಳಕೆ ಪ್ರಮಾಣಪತ್ರವನ್ನು ಸರ್ಕಾರಕ್ಕೆ ಸಲ್ಲಿಸುವುದು.

ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಅನುದಾನವನ್ನು ಸೆಳೆಯುವ, ಬಟವಾಡೆ ಮಾಡುವ ಅಧಿಕಾರವನ್ನು ಈ ಕೆಳಗೆ ಸಹಿ ಮಾಡಿರುವ ಸರ್ಕಾರದ ಅಧೀನ ಕಾರ್ಯದರ್ಶಿ 1 &2, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಇವರಿಗೆ ಮತ್ತು ಮೇಲುರುಜು ಮಾಡುವ ಅಧಿಕಾರವನ್ನು ನಿರ್ದೇಶಕರು, ಎಡಿಬಿ ವಿಭಾಗ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಇವರಿಗೆ ಪ್ರತ್ಯಾಯೋಜಿಸಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಆಇ 01 ಟಿಎಫ್‌ಪಿ 2013, ದಿನಾಂಕ:10.05.2013 ರಲ್ಲಿ ಆಡಳಿತ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಉಮಾವತಿ**

**PD-1216** ಸರ್ಕಾರದ ಅಧೀನ ಕಾರ್ಯದರ್ಶಿ 1 & 2,

**SC-25** ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

## ತೋಟಗಾರಿಕೆ ಸಚಿವಾಲಯ

**ವಿಷಯ:** ಹಿಪ್ಪುನೇರಳೆ ತೋಟಕ್ಕೆ ಹನಿ ನೀರಾವರಿ ಘಟಕ ಅಳವಡಿಸುವ ಸಂಬಂಧ ಘಟಕ ದರ ಪರಿಷ್ಕರಿಸುವ ಕುರಿತು.

**ಓದಲಾಗಿದೆ:**
1. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂಖ್ಯೆ: ರೇನಿ/ಪಿಎಸ್–5/ಸಿಡಿಪಿ/ಹನಿ/26/2012–13, ದಿನಾಂಕ: 22–12–2012 ಮತ್ತು 05–06–2013.
2. ಸರ್ಕಾರದ ಅಪರ ಕಾರ್ಯದರ್ಶಿಗಳು ಮತ್ತು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ದಿನಾಂಕ: 19–09–2013ರ ಸಭಾ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ದಿನಾಂಕ: 22-12-2012 ಮತ್ತು 05-06-2013 ರ ಪತ್ರಗಳಲ್ಲಿ ನೀರಿನ ಸಂರಕ್ಷಣೆ ಮತ್ತು ಲಭ್ಯವಿರುವ ನೀರನ್ನು ಸದುಪಯೋಗಪಡಿಸಿಕೊಂಡು ಹೆಚ್ಚಿನ ಪ್ರದೇಶದಲ್ಲಿ ರೇಷ್ಮೆ ಕೃಷಿಯನ್ನು ಕೈಗೊಳ್ಳಲು ಅನುಕೂಲವಾಗುವಂತೆ ಇಲಾಖೆಯು ಹಿಪ್ಪುನೇರಳೆ ತೋಟಕ್ಕೆ ಹನಿ ನೀರಾವರಿ ಘಟಕ ಅಳವಡಿಸಿಕೊಳ್ಳುವ ರೇಷ್ಮೆ ಕೃಷಿಕರಿಗೆ ಸಹಾಯಧನವನ್ನು 9ನೇ ಪಂಚವಾರ್ಷಿಕ ಯೋಜನೆಯಿಂದ ಕೇಂದ್ರ ಪುರಸ್ಕೃತ ಕೆಟಲಿಟಿಕ್ ಅಭಿವೃದ್ಧಿ ಯೋಜನೆ ಹಾಗೂ ರಾಜ್ಯವಲಯದ ಇತರೇ ಫಲಾನುಭವಿ ಆಧಾರಿತ ಕಾರ್ಯಕ್ರಮಗಳಡಿ ಒದಗಿಸಲಾಗುತ್ತಿದೆ. ಕೇಂದ್ರ ರೇಷ್ಮೆ ಮಂಡಳಿಯು 1 ಹೆಕ್ಟೇರ್ ಹನಿ ನೀರಾವರಿ ಘಟಕ ಅಳವಡಿಕೆಗೆ ರೂ.50,000/- ಗಳ ಘಟಕ ದರ ನಿಗಧಿಪಡಿಸಿದ್ದು, ಸಾಮಾನ್ಯ ವರ್ಗದ ರೈತರಿಗೆ ಶೇ. 75ರ ಸಹಾಯಧನ (ಕೇಂದ್ರದ ಪಾಲು ಶೇ. 50 ಮತ್ತು ರಾಜ್ಯದ ಪಾಲು ಶೇ. 25 ರಷ್ಟು) ಹಾಗೂ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ರೇಷ್ಮೆ ಬೆಳೆಗಾರರಿಗೆ ಶೇ.90ರ ಸಹಾಯಧನವನ್ನು ಒದಗಿಸಲಾಗುತ್ತಿದೆ.

ರೇಷ್ಮೆ ನಿರ್ದೇಶನಾಲಯದಲ್ಲಿ ಜರುಗಿದ ಅಧಿಕಾರಿಗಳ ಹಲವಾರು ಸಭೆಗಳಲ್ಲಿ ತೋಟಗಾರಿಕೆ ಇಲಾಖೆಯು National Mission on Micro Irrigation (NMMI)ಅಡಿಯಲ್ಲಿ ಹನಿ ನೀರಾವರಿ ಘಟಕ ಅಳವಡಿಕೆಗೆ ಘಟಕ ದರಗಳನ್ನು ಪರಿಷ್ಕರಿಸಿದ್ದು, ಕೇಂದ್ರ ರೇಷ್ಮೆ ಮಂಡಳಿಯು ನಿಗಧಿಪಡಿಸಿರುವ ಘಟಕ ದರ ಕಡಿಮೆ ಇರುವುದರಿಂದ ಯಾವುದೇ ಸಂಸ್ಥೆಗಳು/ರೈತರು ಹನಿ ನೀರಾವರಿ ಅಳವಡಿಕೆಗೆ ನಿರೀಕ್ಷಿತ ಪ್ರಮಾಣದಲ್ಲಿ ಮುಂದೆ ಬರುತ್ತಿಲ್ಲವೆಂದು ಅಧಿಕಾರಿಗಳು ಅಭಿಪ್ರಾಯ ವ್ಯಕ್ತಪಡಿಸಿ, ಘಟಕದರವನ್ನು ತೋಟಗಾರಿಕೆ ಇಲಾಖೆ ಮಾದರಿಯಲ್ಲಿಯೇ ಪರಿಷ್ಕರಿಸಲು ಕೋರಿರುತ್ತಾರೆ. National Mission on Micro Irrigation (NMMI) ಸಂಸ್ಥೆಯು 1.2 X 0.6 Meter ಅಂತರದ ಬೆಳೆಗಳ ಹನಿ ನೀರಾವರಿ ಘಟಕ ಅಳವಡಿಕೆಗೆ ರೂ. 97,598/- ಗಳ ಘಟಕದರವನ್ನು ನಿಗಧಿಪಡಿಸಿದ್ದು, ಈ ಅಂತರದ ಘಟಕದರವು ಹಿಪ್ಪುನೇರಳೆ ವ್ಯವಸಾಯಕ್ಕೂ ಸಹ ಸೂಕ್ತವಾಗಿರುತ್ತದೆ. ಆದ್ದರಿಂದ National Mission on Micro Irrigation (NMMI) ಸಂಸ್ಥೆಯು 1.2 X 0.6 Meter ಅಂತರದ ಹನಿ ನೀರಾವರಿ ಘಟಕ ಅಳವಡಿಕೆಗೆ ನಿಗಧಿಪಡಿಸಿರುವ ರೂ.97,598/-ರ ಘಟಕದರವನ್ನು ರೇಷ್ಮೆ ಇಲಾಖೆಗೂ ನಿಗಧಿಪಡಿಸಲು ವಿನಂತಿಸಿರುತ್ತಾರೆ.

2012-13ನೇ ಸಾಲಿನಲ್ಲಿ ಕೇಂದ್ರ ರೇಷ್ಮೆ ಮಂಡಳಿಯು 2011-12ನೇ ಸಾಲಿನಲ್ಲಿ ಬಿಡುಗಡೆಗೊಳಿಸಿದ ಹಣವನ್ನು ಉಪಯೋಗಿಸುತ್ತಿರುವ ಹಿನ್ನಲೆಯಲ್ಲಿ 11ನೇ ಪಂಚವಾರ್ಷಿಕ ಯೋಜನಾ ಅವಧಿಯಲ್ಲಿ ನಿಗಧಿಪಡಿಸಿರುವ ಘಟಕದರಗಳನ್ವಯೇ ಹಣವನ್ನು ಉಪಯೋಗಿಸಲು ತಿಳಿಸಿರುತ್ತಾರೆ. ಕೇಂದ್ರ ರೇಷ್ಮೆ ಮಂಡಳಿಯು 1.00 ಹೆಕ್ಟೇರ್ ಹನಿ ನೀರಾವರಿ ಘಟಕ ಅಳವಡಿಕೆಗೆ ರೂ.50,000/- ಗಳ ಘಟಕ ದರ ನಿಗದಿಪಡಿಸಿದ್ದು, ಸಹಾಯಧನ ನೀಡಿಕೆ ಕೆಳಕಂಡಂತಿದೆ.

| ಕ್ರ ಸಂ | ಕೇಂದ್ರ ರೇಷ್ಮೆ ಮಂಡಳಿ ನಿಗದಿ ಪಡಿಸಿರುವ ಘಟಕ ದರ | ಶೇ. ಸಹಾಯ ಧನ | ಸಹಾಯ ಧನ | | ವಿಶೇಷ ಘಟಕ ಯೋಜನೆ | | ಶೇ. 90% |
|---|---|---|---|---|---|---|---|
| | | | ಕೇಂದ್ರ ರೇಷ್ಮೆ ಮಂಡಳಿ | ರಾಜ್ಯ | ಕೇಂದ್ರ ರೇಷ್ಮೆ ಮಂಡಳಿ | ರಾಜ್ಯ | |
| 1 | Rs. 50,000/- | 75% | 50% Rs. 25,000/- | 25% Rs..12,500/- | Rs..12,500/- | Rs. 20,000/- | |
| 2 | ಪ್ರಸ್ತಾಪಿತ ಘಟಕ ದರ Rs. 97598/- | 75% | Rs. 25,000/- | Rs..48198/- | Rs. 25,000/- | Rs..62838/- | |

2012-13ನೇ ಸಾಲಿಗೆ ಕೇಂದ್ರ ಪುರಸ್ಕೃತ ಕೆಟಲಿಟಿಕ್ ಅಭಿವೃದ್ಧಿ ಯೋಜನೆಯಡಿ ಹನಿ ನೀರಾವರಿ ಘಟಕ ಅಳವಡಿಕೆಗೆ ನಿಗದಿಪಡಿಸಿದ ವಾರ್ಷಿಕ ಗುರಿ ಹಾಗೂ ಫೆಬ್ರವರಿ-2013ರ ಅಂತ್ಯದ ಪ್ರಗತಿ ವಿವರಗಳು ಕೆಳಗಿನಂತಿವೆ.

| ಕ್ರ. ಸಂ | ಕಾರ್ಯಕ್ರಮಗಳ ವಿವರ | ಗುರಿ (ಹೆಕ್ಟೇರ್‌ಗಳಲ್ಲಿ) | | ಪ್ರತಿ ಫೆಬ್ರವರಿ-2013 ಅಂತ್ಯಕ್ಕೆ | | ಬಾಕಿ |
|---|---|---|---|---|---|---|
| | | ಹೆಕ್ಟೇರ್ | ಆರ್ಥಿಕ | ಹೆಕ್ಟೇರ್ | ಆರ್ಥಿಕ | ಹೆಕ್ಟೇರ್ |
| 1. | ಸಿಡಿಪಿ-ಸಾಮಾನ್ಯ | 2825 | 1060.00 | 934 | 350.00 | 1891 |
| 2 | ಸಿಡಿಪಿ-ವಿಶೇಷ ಘಟಕ ಯೋಜನೆ | 219 | 98.55 | 102 | 45.84 | 117 |
| 3 | ಸಿಡಿಪಿ-ಗಿರಿಜನ ಉಪಯೋಜನೆ | 190 | 85.50 | 53 | 23.65 | 137 |

ಪ್ರಸ್ತುತ ರಾಜ್ಯದಲ್ಲಿರುವ ಬರಗಾಲ ಮತ್ತು ಕೊಳವೆಬಾವಿಗಳಲ್ಲಿ ಸೀಮಿತ ನೀರಿನ ಲಭ್ಯತೆಯ ಹಿನ್ನಲೆಯಲ್ಲಿ ಹಿಪ್ಪುನೇರಳೆ ತೋಟಗಳಿಗೆ ಹನಿ ನೀರಾವರಿ ಸೌಲಭ್ಯವನ್ನು ಪರಿಷ್ಕರಿಸಿದ ಘಟಕದರ ಹಾಗೂ ಸಹಾಯಧನದ ಪ್ರಕಾರ ಕಲ್ಪಿಸುವುದು ಅನಿವಾರ್ಯವಾಗಿದೆ ಎಂದು ರೇಷ್ಮೆ ಆಯುಕ್ತರು ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿರುತ್ತಾರೆ.

2013-14ನೇ ಸಾಲಿನಲ್ಲಿ ಇಲಾಖೆಯು 10000 ಹೆಕ್ಟೇರ್ ಪ್ರದೇಶದಲ್ಲಿ ಹಿಪ್ಪುನೇರಳೆ ವಿಸ್ತೀರ್ಣವನ್ನು ಹೆಚ್ಚಿಸಲು ಹಾಗೂ 8500 ಮೆ.ಟನ್ ಕಚ್ಚಾ ರೇಷ್ಮೆ ಉತ್ಪಾದನೆ ಮಾಡುವ ಗುರಿ ಹಮ್ಮಿಕೊಳ್ಳಲಾಗಿದೆ. ಈ ಗುರಿ ಸಾಧನೆಗೆ ಹೆಚ್ಚಿನ ಸಂಖ್ಯೆಯ ರೇಷ್ಮೆ ಬೆಳೆಗಾರರನ್ನು ಆಕರ್ಷಿಸಲು ಹಿಪ್ಪುನೇರಳೆ ತೋಟಕ್ಕೆ ಹನಿ ನೀರಾವರಿ ಅಳವಡಿಕೆಗೆ NMMI ಘಟಕದರ ಮತ್ತು ಸಹಾಯಧನದ ದರದ ಅನ್ವಯ ಸಹಾಯಧನವನ್ನು ನೀಡುವುದು ಸಮರ್ಥನಿಯ. ಇಲಾಖೆಯ ಹಿತದೃಷ್ಟಿ ಮತ್ತು ರೇಷ್ಮೆ ಬೆಳೆಗಾರರ ಆರ್ಥಿಕ ಪರಿಸ್ಥಿತಿಯನ್ನು ಸದೃಡಗೊಳಿಸಲು ಹೆಚ್ಚುವರಿ ವೆಚ್ಚವನ್ನು ರಾಜ್ಯ ಸರ್ಕಾರದಿಂದ ಭರಿಸುವುದು ಅನಿವಾರ್ಯ ಹಾಗೂ ಸಮರ್ಥನಿಯವಾಗಿರುತ್ತದೆ. 2013-14ನೇ ಸಾಲಿಗೆ ಹಿಪ್ಪುನೇರಳೆ ತೋಟಕ್ಕೆ ಹನಿ ನೀರಾವರಿ ಅಳವಡಿಕೆಗೆ ಕೆಳಕಂಡಂತೆ ಗುರಿ ಹೊಂದಿದೆ.

| ಕ್ರ. ಸಂ. | ಕಾರ್ಯಕ್ರಮಗಳ ವಿವರ | ಲೆಕ್ಕ ಶೀರ್ಷಿಕೆ | ಗುರಿ (ಹೆ) | ಸಹಾಯಧನದ ರಾಜ್ಯ ಸರ್ಕಾರದ ಹೆಚ್ಚುವರಿ ಪಾಲು ( ರೂ.ಲಕ್ಷಗಳಲ್ಲಿ) |
|---|---|---|---|---|
| 1 | CDP–ಸಾಮಾನ್ಯ | 2851–00–107–1–35(059) | 850 | 344.91 |
| | CDP-SDP | 2851–00–107–1–35(133) | 25 | 10.14 |
| 2 | CDP–ವಿಶೇಷ ಘಟಕ ಯೋಜನೆ | 2851–00–107–1–38(422) | 18 | 5.95 |
| 3 | CDP-ಗಿರಿಜನ ಉಪಯೋಜನೆ | 2851–00–107–1–38(423) | 15 | 4.96 |
| 4 | ವರದಾನ | 2851–00–107–1–38(059) | 161 | 65.33 |
| | | **ಒಟ್ಟು** | | **431.29** |

2013–14ನೇ ಸಾಲಿಗೆ ನಿಗದಿಪಡಿಸಿರುವ ಗುರಿ ಸಾಧನೆ ಮಾಡಲು ಅನುಕೂಲ ವಾಗುವಂತೆ NMMI ಯೋಜನೆಯಡಿ ನೀಡುತ್ತಿರುವ ಸಹಾಯಧನದಂತೆ ರೇಷ್ಮೆ ಇಲಾಖೆಯಲ್ಲಿಯೂ ಸಹ ಸಹಾಯಧನ ನೀಡಲು ಈಗಾಗಲೇ ನೀಡುತ್ತಿರುವ ಸಹಾಯಧನದ ಜೊತೆಗೆ ಹೆಚ್ಚುವರಿಯಾಗುವ ರೂ.431.29 ಲಕ್ಷಗಳ ಹೆಚ್ಚುವರಿ ವಂಟನೆ ಬೇಕಾಗುತ್ತದೆ. ಪರಿಷ್ಕೃತ ಘಟಕದರಗಳನ್ನು ಅಳವಡಿಸಿಕೊಳ್ಳಲು ಹಾಗೂ ಶೇಕಡ 80ರಂತೆ ಸಹಾಯಧನ ಮೊತ್ತ ನೀಡಲು ಸರ್ಕಾರದ ಅನುಮೋದನೆ ನೀಡಿದಲ್ಲಿ ಮೇಲೆ ಹೇಳಿರುವ ಕಾರ್ಯಕ್ರಮಗಳಡಿ ಲಭ್ಯವಾಗುವ ವಂಟನೆಯಲ್ಲಿ ವೆಚ್ಚವನ್ನು ಭರಿಸಿ ಅನುಷ್ಠಾನಗೊಳಿಸಲಾಗುವುದು. ಅಗತ್ಯತೆಗೆ ಅನುಗುಣವಾಗಿ ಹೆಚ್ಚುವರಿ ವಂಟನೆಗೆ ನಂತರದಲ್ಲಿ ಪ್ರಸ್ತಾವನೆ ಸಲ್ಲಿಸಲಾಗುವುದೆಂದು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ತಿಳಿಸುತ್ತಾ ಆದೇಶ ನೀಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ದಿನಾಂಕ: 19–09–2013 ರ ಸಭಾ ನಡವಳಿಗಳಲ್ಲಿ ಕರ್ನಾಟಕವು ರೇಷ್ಮೆ ಉತ್ಪಾದನೆಯಲ್ಲಿ ರಾಷ್ಟ್ರದಲ್ಲಿ ಪ್ರಥಮ ಸ್ಥಾನ ಹೊಂದಿದ್ದು, ರೇಷ್ಮೆ ಕೃಷಿಯು ಗ್ರಾಮೀಣ ಜನರಿಗೆ ಉದ್ಯೋಗಾವಕಾಶ ಕಲ್ಪಿಸುವ ಉಪ ಕಸುಬಾಗಿರುವುದರಿಂದ ಹಾಗೂ ರೇಷ್ಮೆ ಬೆಳೆಗಾರರ ಹಿತದೃಷ್ಟಿಯಿಂದ ರೇಷ್ಮೆ ವೈಭವದ ಪರಂಪರೆ ಮುಂದುವರೆಸಲು ರೇಷ್ಮೆ ಕೃಷಿ ವಲಯ/ರೇಷ್ಮೆ ಬೆಳೆಗಾರರ ಬೆಂಬಲಕ್ಕೆ ನಿಲ್ಲುವುದು ಅವಶ್ಯಕವಾಗಿದೆ. ಹಾಲಿ ರೇಷ್ಮೆ ಇಲಾಖೆಯಲ್ಲಿ ಒಂದು ಹೆಕ್ಟೇರ್ ಪ್ರದೇಶದಲ್ಲಿ ಹನಿ ನೀರಾವರಿ ಕೈಗೊಳ್ಳಲು ನಿಗದಿಪಡಿಸಿರುವ ಘಟಕ ದರ ರೂ.50000/– ಗಳನ್ನು ಪರಿಷ್ಕರಿಸಿ, ಸಂಸ್ಥೆಯು ತೋಟಗಾರಿಕೆ ಬೆಳೆಗಳಿಗೆ ನಿಗದಿಪಡಿಸಿರುವಂತೆ ಹಿಪ್ಪುನೇರಳೆ ಬೆಳೆಗಳಿಗೂ ಸಹ ಒಂದು ಹೆಕ್ಟೇರ್ ಹನಿ ನೀರಾವರಿಗೆ ರೂ.97,598/– ಗಳ ಘಟಕ ದರ ನಿಗದಿಪಡಿಸಲು ಸಮಿತಿಯು ಅನುಮೋದನೆ ನೀಡಿರುತ್ತದೆ.

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ರೇಷ್ಮೆ ಇಲಾಖೆಯಲ್ಲಿ ಒಂದು ಹೆಕ್ಟೇರ್ ಪ್ರದೇಶದಲ್ಲಿ ಹಿಪ್ಪುನೇರಳೆ ತೋಟಕ್ಕೆ ಹನಿ ನೀರಾವರಿ ಘಟಕ ಅಳವಡಿಸುವುದಕ್ಕೆ ಈಗಿರುವ ದರ ರೂ.50,000/– ಗಳಿಂದ ರೂ.97,598/– ಗಳನ್ನು ದಿನಾಂಕ: 01–04–2013 ರಿಂದ ಪೂರ್ವಾನ್ವಯವಾಗಿ ನಿಗದಿಪಡಿಸಲು ಮತ್ತು ಫಲಾನುಭವಿಗಳಿಗೆ ನೀಡುವ ಸಬ್ಸಿಡಿಯನ್ನು ಈಗಿರುವ ಶೇ.75 ರಿಂದ ಶೇ.90 ಕ್ಕೆ ನಿಗದಿಪಡಿಸಲು ಮತ್ತು ಈ ವೆಚ್ಚವನ್ನು ಕೇಂದ್ರ ಪುರಸ್ಕೃತ ಕೆಟಲಿಟಿಕ್ ಅಭಿವೃದ್ಧಿ ಯೋಜನೆಯಡಿಯ ಲೆಕ್ಕ ಶೀರ್ಷಿಕೆಗಳಡಿಯಲ್ಲಿ ಭರಿಸಲು ಸರ್ಕಾರವು ನಿರ್ಧರಿಸಿರುವ ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ತೋಇ 03 ರೇಕೃವಿ 2013, ಬೆಂಗಳೂರು, ದಿನಾಂಕ:10–12–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ರೇಷ್ಮೆ ಇಲಾಖೆಯಲ್ಲಿ ಒಂದು ಹೆಕ್ಟೇರ್ ಪ್ರದೇಶದಲ್ಲಿ ಹಿಪ್ಪುನೇರಳೆ ತೋಟಕ್ಕೆ ಹನಿ ನೀರಾವರಿ ಘಟಕ ಅಳವಡಿಸುವುದಕ್ಕೆ ಈಗಿರುವ ಘಟಕ ದರ ರೂ.50,000/– ಗಳಿಂದ ರೂ.97,598/– ಕ್ಕೆ ದಿನಾಂಕ: 01–04–2013 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಮತ್ತು ಫಲಾನುಭವಿಗಳಿಗೆ ನೀಡುವ ಸಬ್ಸಿಡಿಯನ್ನು ಈಗಿರುವ ಶೇ.75 ರಿಂದ ಶೇ.90 ಕ್ಕೆ ನಿಗದಿಪಡಿಸಿ ಸರ್ಕಾರವು ಆದೇಶಿಸಿದೆ.

ಈ ವೆಚ್ಚವನ್ನು ಯೋಜನಾ ಲೆಕ್ಕ ಶೀರ್ಷಿಕೆ 2851–00–107–1–35(059), 2851–00–107–1–35(133), 2851–00–107–1–38(422), 2851–00–107–1–38(423) ಮತ್ತು 2851–00–107–1–38(059) ರಡಿ ಭರಿಸತಕ್ಕದ್ದು.

ಈ ಆದೇಶವನ್ನು ಯೋಜನೆ ಇಲಾಖೆ ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ 44 ಎಫ್‌ಆರ್‌ಬಿ 2013, ದಿನಾಂಕ: 30–08–2013 ಮತ್ತು ಆಇ 155 ವೆಚ್ಚ–4/2013, ದಿನಾಂಕ: 22–11–2013 ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಬಿ. ವಿಜಯಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ತೋಟಗಾರಿಕೆ ಇಲಾಖೆ (ರೇಷ್ಮೆ)

**PR.22**

**SC.50**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಜೆ.ಎಲ್. ಕಪ್ಪಲಿ, ಮಾಜಿ ಎ.ಪಿ.ಸಿ.–218, ಡಿ.ಎ.ಆರ್. ಘಟಕ, ಗದಗ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಗದಗ ಜಿಲ್ಲೆ, ಗದಗ ಇವರ ಆದೇಶ ಸಂಖ್ಯೆ: ಡಿ.ಇ./ಪಿ.ಆರ್–6/29/2004–05 (ಆದೇಶ ಪುಸ್ತಕ ಸಂಖ್ಯೆ: 181/2005) ದಿನಾಂಕ 25.04.2005
2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ: ಅಪೀಲು/28/ಉವ/2005 ದಿನಾಂಕ 06.10.2005
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 17.07.2013
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)30/2013–14 ದಿನಾಂಕ 13.09.2013

**ಪ್ರಸ್ತಾವನೆ:**

ಶ್ರೀ ಜೆ.ಎಲ್.ಕಪ್ಪಲಿ, ಮಾಜಿ ಎ.ಪಿ.ಸಿ.–218, ಡಿ.ಎ.ಆರ್. ಘಟಕ, ಗದಗ ಜಿಲ್ಲೆ ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ಗೈರುಹಾಜರಿ ಹಾಗೂ ನಿರ್ಲಕ್ಷ್ಯತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ನೀವು ದಿನಾಂಕ: 28.04.2004 ರಿಂದ ಕರ್ತವ್ಯಕ್ಕೆ ಗೈರಹಾಜರ ಉಳಿದಿರುತ್ತಿರಿ, ನಿಮ್ಮ ಗೈರಹಾಜರಾತಿ ಅವಧಿಯಲ್ಲಿ ನೀವು ಮೇಲಾಧಿಕಾರಿಗಳಿಗೆ ಯಾವುದೇ ಮಾಹಿತಿ ನೀಡಿರುವುದಿಲ್ಲಾ ಹಾಗೂ ರಜೆ ಮಂಜೂರಾತಿಗಾಗಿ ಅರ್ಜಿಯನ್ನು ಸಲ್ಲಿಸಿರುವುದಿಲ್ಲಾ ಅಲ್ಲದೇ ನೀವು ಕರ್ತವ್ಯಕ್ಕೆ ಗೈರ ಹಾಜರ ಉಳಿದು 21 ದಿನಗಳ ಕಾಲ ಅನಧಿಕೃತ ಗೈರ ಹಾಜರ ಉಳಿದ್ದಿದರಿಂದ ನಿಮಗೆ ಪೊಲೀಸ್ ಮ್ಯಾನುವಲ್ ಆದೇಶ ಸಂಖ್ಯೆ 525 ನೇದ್ದರ ಮೇರೆಗೆ ಈ ಕಛೇರಿಯಿಂದ ದಿನಾಂಕ: 20.05.2004 ರಂದು ಕರ್ತವ್ಯ ಪಲಾಯನ ಪತ್ರವನ್ನು ಜಾರಿಕುರಿತು ಕಳುಹಿಸಿದ್ದು, ಅದನ್ನು ನೀವು ದಿನಾಂಕ: 25.05.2004 ರಂದು ಸ್ವೀಕರಿಸಿದರೂ ಸಹ ಕೂಡಲೇ ಆರಕ್ಷಕ ಅಧೀಕ್ಷಕರ ಮುಂದೆ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೇ ಈವರೆಗೂ ಕರ್ತವ್ಯದ ಮೇಲೆ ಗೈರಹಾಜರ ಉಳಿದು ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷತನ ಹಾಗೂ ಕರ್ತವ್ಯ ಚ್ಯುತಿ ಗೈದಿದ್ದೀರಿ.

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧಿಕ್ಷಕರು, ಗದಗ ಜಿಲ್ಲೆ, ಗದಗ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ 25.04.2005ರ ಆದೇಶದಲ್ಲಿ ಅರ್ಜಿದಾರರನ್ನು ಪೊಲೀಸ್ ಇಲಾಖೆಯ ಸೇವೆಯಿಂದ ತೆಗೆದು ಹಾಕಿ, ಇವರು ದಿನಾಂಕ 28.04.2004ರಿಂದ 13.08.2004ರವರೆಗೆ ಕರ್ತವ್ಯದ ಮೇಲೆ ಗೈರು ಹಾಜರು ಉಳಿದ ಅವಧಿಯನ್ನು ವೇತನ ರಹಿತ ರಜೆಯೆಂದು ಪರಿಗಣಿಸಲಾದ ದಂಡನೆಯನ್ನು ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 06.10.2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ನಿರ್ಲಕ್ಷ್ಯತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 92 ಪೊಸಿಅ 2013 ಬೆಂಗಳೂರು, ದಿನಾಂಕ: 12.12.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜೆ.ಎಲ್.ಕಪ್ಪಲಿ, ಮಾಜಿ ಎ.ಪಿ.ಸಿ.–218, ಡಿ.ಎ.ಆರ್. ಘಟಕ, ಗದಗ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**PR.36**

**SC.30**

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಕಬಿನಿ ಜಲಾಶಯ ಯೋಜನೆಯ ನೀರಾವರಿ ಸಲಹಾ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ :–**

1. ಸರ್ಕಾರದ ಆದೇಶ ಸಂಖ್ಯೆ:ಜಸಂಇ 58 ಎಂಎಂಕೆ 2004, ದಿನಾಂಕ:24–06–2004.
2. ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ, ಇವರ ಪತ್ರ ಸಂಖ್ಯೆ:ಕಾನೀನಿ/ ತಾಂತ್ರಿಕ–9/61/2012–13, ದಿನಾಂಕ:05–07–2013.

**ಪ್ರಸ್ತಾವನೆ :–**

ಮೇಲೆ ಓದಲಾದ (1) ರ ಸರ್ಕಾರದ ಆದೇಶದಲ್ಲಿ ಕಬಿನಿ ಜಲಾಶಯದ ನೀರಿನ ನಿರ್ವಹಣೆಗಾಗಿ ಅಧಿಕಾರಿ ಮತ್ತು ಅಧಿಕಾರೇತರ ಸದಸ್ಯರನ್ನೊಳಗೊಂಡ ನೀರಾವರಿ ಸಲಹಾ ಸಮಿತಿಯನ್ನು ಮುಂದಿನ ಆದೇಶ ಹೊರಡಿಸುವವರೆಗೂ ಪುನರ್ ರಚಿಸಲಾಗಿತ್ತು.

2. ಮೇಲೆ ಓದಲಾದ (2) ರ ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ, ಇವರು ತಮ್ಮ ಪತ್ರದಲ್ಲಿ ವಿಷಯದ ಬಗ್ಗೆ ಪ್ರಸ್ತಾಪಿಸುತ್ತಾ, ಅಧಿಕಾರಿ ಸದಸ್ಯರು, ಅಧಿಕಾರೇತರ ಸದಸ್ಯರು, ವಿಶೇಷ ಆಹ್ವಾನಿತ ಅಧಿಕಾರಿ ಸದಸ್ಯರು ಹಾಗೂ ವಿಶೇಷ ಆಹ್ವಾನಿತ ಅಧಿಕಾರೇತರ ಸದಸ್ಯರುಗಳ ಪಟ್ಟಿಯನ್ನು ಲಗತ್ತಿಸಿ, ಕಬಿನಿ ಜಲಾಶಯದಿಂದ 2013 ನೇ ಸಾಲಿನ ಖಾರೀಫ್ ಬೆಳೆಗಳಿಗೆ ನೀರು ಹರಿಸುವುದು ಅತ್ಯವಶ್ಯಕವಾಗಿರುವುದರಿಂದ ಕಬಿನಿ ನೀರಾವರಿ ಸಲಹಾ ಸಮಿತಿ ಪುನರ್ ರಚಿಸುವ ಪ್ರಸ್ತಾವನೆಗೆ ಸರ್ಕಾರದಿಂದ ಆದೇಶ ಹೊರಡಿಸಲು ಕೋರಿರುತ್ತಾರೆ.

3. ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಜಸಂಇ 105 ಎಂಎಂಕೆ 2013, ಬೆಂಗಳೂರು, ದಿನಾಂಕ:31–10–2013**

ಕಬಿನಿ ಜಲಾಶಯದ ನೀರಿನ ನಿರ್ವಹಣೆಗಾಗಿ ಅಧಿಕಾರಿ ಸದಸ್ಯರು, ಅಧಿಕಾರೇತರ ಸದಸ್ಯರು, ವಿಶೇಷ ಆಹ್ವಾನಿತ ಅಧಿಕಾರಿ ಸದಸ್ಯರು ಹಾಗೂ ವಿಶೇಷ ಆಹ್ವಾನಿತ ಅಧಿಕಾರೇತರ ಸದಸ್ಯರಗಳನ್ನು ಒಳಗೊಂಡ ಕಬಿನಿ ಜಲಾಶಯ ಯೋಜನೆಯ ನೀರಾವರಿ ಸಲಹಾ ಸಮಿತಿಯನ್ನು ಈ ಕೆಳಕಂಡಂತೆ ಪರಿಷ್ಕರಿಸಿ ಮುಂದಿನ ಆದೇಶ ಹೊರಡಿಸುವವರೆಗೆ ಪುನರ್ ರಚಿಸಲಾಗಿದೆ :

**ಅಧ್ಯಕ್ಷರು:–** ಶ್ರೀ ವಿ.ಶ್ರೀನಿವಾಸ ಪ್ರಸಾದ್, ಮಾನ್ಯ ಕಂದಾಯ ಸಚಿವರು, ಕರ್ನಾಟಕ ಸರ್ಕಾರ, ಹಾಗೂ ಮೈಸೂರು ಜಿಲ್ಲಾ ಉಸ್ತುವಾರಿ ಸಚಿವರು

**ಅಧಿಕಾರಿ ಸದಸ್ಯರು:–**

1. ಆಡಳಿತಾಧಿಕಾರಿಗಳು, ಕಾವೇರಿ ಜಲಾನಯನ, ಅಚ್ಚುಕಟ್ಟು ಅಭಿವೃದ್ಧಿ ಪ್ರಾಧಿಕಾರ, ಮೈಸೂರು.
2. ಮುಖ್ಯಇಂಜಿನಿಯರ್, ನೀರಾವರಿ (ದ) ವಲಯ, ಮೈಸೂರು
3. ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.
4. ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ, ಚಾಮರಾಜನಗರ.
5. ಜಂಟಿ ನಿರ್ದೇಶಕರು, ಕೃಷಿ ಇಲಾಖೆ, ಮೈಸೂರು.
6. ಸಂಶೋಧನಾಧಿಕಾರಿಗಳು, ವಿ.ಸಿ. ಫಾರಂ, ಮಂಡ್ಯ.
7. ಅಧೀಕ್ಷಕ ಅಭಿಯಂತರರು, ಕಬಿನಿ ಮತ್ತು ವರುಣಾ ನಾಲಾ ವೃತ್ತ, ಮೈಸೂರು

**ಅಧಿಕಾರೇತರ ಸದಸ್ಯರು :–**

1. ಶ್ರೀ ಚಿಕ್ಕಮಾದು, ಮಾನ್ಯ ಶಾಸಕರು, ಹೆಚ್.ಡಿ.ಕೋಟೆ
2. ಶ್ರೀ ಪುಟ್ಟರಂಗಶೆಟ್ಟಿ, ಮಾನ್ಯ ಶಾಸಕರು, ಚಾಮರಾಜನಗರ.
3. ಶ್ರೀ ಎಸ್.ಜಯಣ್ಣ, ಮಾನ್ಯ ಶಾಸಕರು, ಕೊಳ್ಳೇಗಾಲ.
4. ಶ್ರೀ ಆರ್. ನರೇಂದ್ರ, ಮಾನ್ಯ ಶಾಸಕರು, ಹನೂರು.
5. ಶ್ರೀ ಸಿ.ಹೆಚ್.ವಿಜಯಶಂಕರ್, ಮಾನ್ಯ ವಿಧಾನಪರಿಷತ್ ಸದಸ್ಯರು, ಮೈಸೂರು
6. ಶ್ರೀ ಗೋ.ಮಧುಸೂದನ್, ಮಾನ್ಯ ವಿಧಾನಪರಿಷತ್ ಸದಸ್ಯರು, ಮೈಸೂರು
7. ಶ್ರೀ ಮರಿತಿಬ್ಬೇಗೌಡ, ಮಾನ್ಯ ವಿಧಾನಪರಿಷತ್ ಸದಸ್ಯರು
8. ಶ್ರೀ ಸಿದ್ದರಾಜು, ಮಾನ್ಯ ವಿಧಾನಪರಿಷತ್ ಸದಸ್ಯರು

**ವಿಶೇಷ ಆಹ್ವಾನಿತ ಅಧಿಕಾರಿ ಸದಸ್ಯರು :–**

1. ಸರ್ಕಾರದ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ, ಬೆಂಗಳೂರು.
2. ಸರ್ಕಾರದ ಕಾರ್ಯದರ್ಶಿಗಳು, ಕಾನೂನು ಇಲಾಖೆ, ಬೆಂಗಳೂರು.
3. ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಬೆಂಗಳೂರು.

**ವಿಶೇಷ ಆಹ್ವಾನಿತ ಅಧಿಕಾರೇತರ ಸದಸ್ಯರು :–**

1. ಡಾ॥ ಹೆಚ್.ಸಿ.ಮಹದೇವಪ್ಪ, ಲೋಕೋಪಯೋಗಿ ಸಚಿವರು, ಕರ್ನಾಟಕ ಸರ್ಕಾರ
2. ಶ್ರೀ ಹೆಚ್.ಎಸ್ ಮಹದೇವಪ್ರಸಾದ್, ಮಾನ್ಯ ಸಹಕಾರ ಸಚಿವರು, ಕರ್ನಾಟಕ ಸರ್ಕಾರ
3. ಶ್ರೀ ಅಡಗೂರು ಹೆಚ್. ವಿಶ್ವನಾಥ್, ಮಾನ್ಯ ಲೋಕಸಭಾ ಸದಸ್ಯರು, ಮೈಸೂರು ಕ್ಷೇತ್ರ, ಮೈಸೂರು
4. ಶ್ರೀ ಆರ್. ಧ್ರುವನಾರಾಯಣ, ಮಾನ್ಯ ಲೋಕಸಭಾ ಸದಸ್ಯರು, ಚಾಮರಾಜನಗರ ಕ್ಷೇತ್ರ.
5. ಶ್ರೀ ಎಸ್.ನಾಗರಾಜು (ಸಂದೇಶ್ ನಾಗರಾಜು), ಮಾನ್ಯ ವಿಧಾನಪರಿಷತ್ ಸದಸ್ಯರು, ಮೈಸೂರು

2. ಸದರಿ ಸಮಿತಿಯನ್ನು ಈ ಕೆಳಕಂಡ ನಿಬಂಧನೆಗಳಿಗೊಳಪಟ್ಟು ಪುನರ್ ರಚಿಸಲಾಗಿದೆ :

a. The use of Cauvery water as per the notified order of the Cauvery Water Dispute Tribunal dated:19-02-2013 is without prejudice to the pending Civil Appeal No.2453/2007 filed by the State before the Hon'ble Supreme Court ; and

b. Use of Cauvery water is subject to the directions, if any, issued by the Supervisory Committee on Cauvery constituted by the Central Government vide notification dated:22-05-2013.

3. ಸದರಿ ಸಮಿತಿಯ ಅಧಿಕಾರೇತರ ಸದಸ್ಯರ ಮತ್ತು ವಿಶೇಷ ಆಹ್ವಾನಿತ ಅಧಿಕಾರೇತರ ಸದಸ್ಯರ ಪ್ರವಾಸ ಭತ್ಯೆ ಮತ್ತು ಇತರೆ ಭತ್ಯೆಗಳನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ:03–02–2001, ರನ್ವಯ ಪಾವತಿ ಮಾಡತಕ್ಕದ್ದು. ಈ ಬಗ್ಗೆ ತಗಲುವ ವೆಚ್ಚವನ್ನು ಕಾವೇರಿ ನೀರಾವರಿ ನಿಗಮ ನಿಯಮಿತದಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್.ಆರ್.ವಿಜಯಸಾರಥಿ**

ವಿಶೇಷ ಕರ್ತವ್ಯಾಧಿಕಾರಿ(ತಾಂತ್ರಿಕ, ಎಂಎಂಐ–3),

ಜಲ ಸಂಪನ್ಮೂಲ ಇಲಾಖೆ.

**PR.48**

**SC.50**

ಸರ್ಕಾರಿ ಕೇಂದ್ರ ಮುದ್ರಣಾಲಯ, ಫಟಕ–2, ಬೆಂಗಳೂರು–59.